ಕೋಟದ ಭೌಗೋಲಿಕ ಗಡಿಗೂ ಸೀಮಿತವಾಗಿಲ್ಲ". (ಜಿ. ರಾಜಶೇಖರ, ಅಶೋಕ : ಟಿ.ಪಿ. (ಸಂ.) ೧೯೯೩. ಪು. ೧೨೦-೨೧) ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿ ಹೀಗಾಗಿ ಮಹತ್ವದ ಕಾದಂಬರಿಯಾಗಿದೆ. ಮತ್ತು ಅದು ಪ್ರತಿಪಾದಿಸುವುದು ಕೇವಲ ಬ್ರಾಹ್ಮಣರ ಕುಟುಂಬವೊಂದರ ಏಳು ಬೀಳನ್ನು ಮಾತ್ರವೇ ಅಲ್ಲ. ಈ ಕಾದಂಬರಿಯಲ್ಲಿ ಮೂರು ತಲೆಮಾರು ಮೂರು ವಿಭಿನ್ನವಾದ ನೆಲೆಗಳನ್ನು ಪ್ರತಿಪಾದಿಸುತ್ತವೆ. ಈ ಕಾದಂಬರಿಯ ಮೊದಲ ಮಾತಿನಲ್ಲಿ ಈ ಕಾದಂಬರಿಯ ಕುರಿತು ಹೀಗೆ ಹೇಳುತ್ತಾರೆ: "ಈ ಕಾದಂಬರಿ ಬರೆಯುವುದರಲ್ಲಿ ತುಸು ದೊಡ್ಡ ಸಾಹಸ ಮಾಡಿದ್ದೇನೆ. ನನ್ನ ಹಿಂದಿನವು ಇಷ್ಟು ದೊಡ್ಡವರಾಗಿರಲಿಲ್ಲ. ಕಾರಣ ಹೀಗೂ ಇದೆ – ಇದು ಒಂದೇ ತಲೆಮಾರಿನ ಕತೆಯಲ್ಲ. ಮೂರು ತಲೆಮಾರುಗಳ ಕತೆ. ೧೮೫೦ರ ಸುಮಾರಿಗೆ ತೊಡಗುವ ಈ ಕತೆಯು ೧೯೪೦ರಲ್ಲಿ ಮುಗಿಯುತ್ತದೆ. ನನ್ನ ಊರಿನ ಬಡತನದ ಬಾಳ್ವೆಯೇ ಕತೆಯ ವಸ್ತುವಾಗಿದೆ, ಈ ಬಾಳ್ವೆಯ ಪ್ರಶ್ನೆ ಈ ಮೂರು ತಲೆಮಾರುಗಳಲ್ಲಿ ಹೇಗೆ ಪ್ರತ್ಯುತ್ತರಗೊಳ್ಳುತ್ತದೆ – ಎಂಬುದು ಇದರಲ್ಲಿ ಚಿತ್ರೀಕರಿಸಲ್ಪಟ್ಟಿದೆ". ಕಾರಂತರು ಹೇಳುವಂತೆ ಈ ಕಾದಂಬರಿಯು ಮುಕ್ತಾಯಗೊಳ್ಳುವುದು ೧೯೪೦ರಲ್ಲಿ. ೧೯೪೦ ಅಂದರೆ ಸ್ವಾತಂತ್ರ್ಯ ಪೂರ್ವದ ಸನ್ನಿವೇಶ. ಮೊದಲ ತಲೆಮಾರಿನ ರಾಮೈತಾಳರದು ಒಂದು ಕ್ರಮ. ಲಚ್ಚನದು ಮತ್ತೊಂದು. ಹಾಗೂ ಮೂರನೆಯ ತಲೆಮಾರಿಗೆ ಸೇರಿದ ರಾಮನದು ಬೇರೆ. ಮೊದಲ ತಲೆಮಾರಿನ ರಾಮೈತಾಳರು ಒಂದು ಮಾದರಿಯಲ್ಲಿ ಬದುಕಿದರೆ ಅವರ ಮಗನದು ಮತ್ತೊಂದು ಜೀವನ ಕ್ರಮ. ಲಚ್ಚನ ಶಿಕ್ಷಣದ ಕುರಿತು ಯೋಚಿಸುವಾಗ ರಾಮೈತಾಳರು ಒಂದು ತೆರನಾಗಿ ಯೋಚಿಸುತ್ತಾರೆ. ಅವರಿಗೆ ತಾವು ಪಡೆದುಕೊಂಡ ಸಾಂಪ್ರದಾಯಿಕವಾದ ವಿದ್ಯೆಯಿಂದ ಉಪಯೋಗವಿಲ್ಲವೆಂದು ಅನಿಸಿದೆ. ಅವರಿಂದ ಯಾವುದೇ ಉದ್ಯೋಗವು ಸಾಧ್ಯವಿಲ್ಲ. ಅಷ್ಟೇ ಅಲ್ಲದೆ ಅದರಿಂದ ವರಮಾನವೂ ಸಾಧ್ಯವಿಲ್ಲವೆಂದು ಅನಿಸಿದೆ. ಇಂಗ್ಲೀಷ್ ಶಿಕ್ಷಣದಿಂದ ಯಾವುದೇ ಹೊಸ ಮಾದರಿಯ ಉದ್ಯೋಗವೆಂದು ರಾಮೈತಾಳರು ಭಾವಿಸಿದ್ದು ಸಹಜವಾಗಿತ್ತು. ಇಂಗ್ಲೀಷ್ ಮಾದರಿಯ ಶಿಕ್ಷಣ ವ್ಯವಸ್ಥೆಯು ಭಾರತೀಯ ಪಾರಂಪರಿಕವಾದ ಶಿಕ್ಷಣ ಕ್ರಮವನ್ನು ನಾಶಪಡಿಸಿತು. ಇಂಗ್ಲೀಷ್ ಶಿಕ್ಷಣವು ಭಾರತದಲ್ಲಿ ಚಾಲ್ತಿಗೆ ಬಂದಾಗ ಅದಕ್ಕೊಂದು ಉದ್ದೇಶವಿತ್ತು. ಏಕಕಾಲಕ್ಕೆ ಅದು ಭಾರತದಲ್ಲಿ ಹೊಸ ಮಾದರಿಯ ಉತ್ಪಾದನೆಯನ್ನು ತಂದುದರಿಂದ ಅದಕ್ಕೆ ತಕ್ಕದಾದ ಜನರ ಕೌಶಲವನ್ನು ರೂಪಿಸಬೇಕಿತ್ತು. ಈಗಾಗಲೇ ಅನೇಕ ಚರಿತ್ರೆಕಾರರು ಹೇಳಿರುವಂತೆ ಆ ಕಾಲದ ಶಿಕ್ಷಣ ವ್ಯವಸ್ಥೆಯು 'ಸಾಂಸ್ಕೃತಿಕ ವಿಸ್ತರಣೆ'ಗೆ ಸಹಾಯಕಾರಿಯಾಗಿತ್ತು. ಕಾರಂತರು 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ವಿವರಿಸುವುದು ಕೂಡಾ ಅದನ್ನೇ. ಪ್ರಾದೇಶಿಕ ಸಂಸ್ಕೃತಿಯೊಂದು ಹೇಗೆ ಪಲ್ಲಟಗೊಂಡಿತು ಎಂಬುದು ಕಾರಂತರಿಗೆ ಮುಖ್ಯವಾಗಿದೆ. ಸಾಂಪ್ರದಾಯಿಕ ಜೀವನ ಕ್ರಮಕ್ಕೆ ; ಸಮಾಜಕ್ಕೆ ಪೌರೋಹಿತ್ಯವೆಂಬುದು ಎಷ್ಟು ಮುಖ್ಯವಾಗಿತ್ತೋ ಅದೇ ಪಲ್ಲಟಕ್ಕೆ ಗುರಿಯಾಗಿದೆ.

ವರ್ಣಾಶ್ರಮ, ಧರ್ಮಕ್ಕೂ ಜಾತಿಗೂ ವ್ಯತ್ಯಾಸವಿದೆ. ವರ್ಣಾಶ್ರಮ ಧರ್ಮದಲ್ಲಿ ವರ್ಣ ಮತ್ತು ಕೆಲಸಕ್ಕೆ ಕೆಲವು ನಿಗದಿತ ನಮೂನೆ ನಮೂನೆಗಳಿವೆ. ವರ್ಣಾಶ್ರಮ ಧರ್ಮದಲ್ಲಿ ರಾಜನೇ ರಾಜಕೀಯ ವ್ಯವಸ್ಥೆಯ ಪ್ರಮುಖ ಕೇಂದ್ರವಾಗಿದ್ದಾನೆ. ಅಧಿಕಾರ–ಬಲ–ರಾಜ ಈ ಮೂರು ಅಂಶಗಳು ಜೊತೆ ಸೇರಿಕೊಂಡಿದ್ದವು. ಆದರೆ, ಪ್ರಾದೇಶಿಕವಾಗಿ ಜಾತಿಯ ಯಜಮಾನಿಕೆಯ ಅಂಶಗಳು ಭಿನ್ನವಾಗಿದ್ದವು. ಬ್ರಿಟೀಶರ ಕಾಲದಲ್ಲಿ ಸಾಂಪ್ರದಾಯಿಕವಾದ ಜೀವನ ವಿಧಾನಗಳು ಬದಲಾದವು. ಬ್ರಿಟೀಶ್ ಮಾದರಿಯ ಆಡಳಿತಾತ್ಮಕ ವ್ಯವಸ್ಥೆಯಲ್ಲಿ ಬ್ರಾಹ್ಮಣರು ಸಾಂಪ್ರದಾಯಿಕ ಜೀವನ ವಿಧಾನದಿಂದ ಹೊರಗೆ ಬಂದ ಪರಿಸ್ಥಿತಿಯನ್ನು ಎಂ.ಎನ್. ಶ್ರೀನಿವಾಸರು ಬೇರೊಂದು ಮಾದರಿಯಲ್ಲಿ ವರ್ಣಿಸುತ್ತಾರೆ. "ಬ್ರಾಹ್ಮಣರು ಬಾಟಲಿಯಿಂದ ಹೊರಗಡೆಗೆ ಬಂದ ಪರಿಸ್ಥಿತಿಯದು", ಸಾಂಪ್ರದಾಯಿಕ ಸಮಾಜದಲ್ಲಿ ಜಮೀನಿನ ಹಕ್ಕು ಮತ್ತು ರಾಜಕೀಯ ಅಧಿಕಾರದ ಜೊತೆಗೆ ಪಡೆದುಕೊಂಡಿದ್ದ ಸಂಬಂಧವು ವಸಾಹತುಶಾಹಿ ಅನುಭವದ ಕಾಲಘಟ್ಟದಲ್ಲಿ ಬದಲಾಯಿತು. 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ರಾಮೈತಾಳರಿಗೆ ಪ್ರಾರಂಭವಾದ ಅನುಮಾನವು ಈ ಬಗೆಯದು. ಭೂಮಿಯನ್ನು ನಂಬಿ ಯಾವುದೇ ಮಾದರಿಯ ಲಾಭವಿಲ್ಲ ಹಾಗೂ ಸಾಂಪ್ರದಾಯಿಕವಾದ ಕಸುಬನ್ನು ನಂಬಿ ಕೂಡಾ. ಇದರಿಂದಲೇ ಅವರಿಗೆ ಲಚ್ಚನ ಬಗ್ಗೆ ಹೊಸ ರೀತಿಯ ಆಸೆಯು ಪ್ರಾರಂಭವಾಗಿದೆ. ಮೊದಲ ಮಗ ಲಚ್ಚ ಬೇರೆ ವಿದ್ಯೆಯನ್ನು ಕಲಿಯಲಿ ಹಾಗೂ ಮುಂದೆ ಸರಸೋತಿಯು ಮುಂದೆ ಬೇರೊಂದು ಮಗುವನ್ನು ಹಡೆದರೆ ಅವನನ್ನು ವೈದಿಕ ವಿದ್ಯೆಗೆ ಕಳಿಸಿದರೆ ಸರಿಯೆಂದು ಅವರಿಗೆ ಅನಿಸಿದೆ. ಶಂಕರ ಐಗಳೊಂದಿಗೆ ಮಾತಾಡುವಾಗ ರಾಮೈತಾಳರು ಅದೇ ಮಾತು ಹೇಳುತ್ತಾರೆ : "ದೇವರು ಏನು ನಡೆಸುತ್ತಾನೋ ಅದು ಅಂತು ಊರಿನ ಗುರಿಕಾರರ ಕೈಯಲ್ಲಿ ಇದೊಂದು ಶ್ರಾದ್ಧದ ಬ್ರಾಹ್ಮಣ ಅನಿಸಿಕೊಳ್ಳದಿದ್ದರೆ ಸಾಕು" ಎಂದರು (ಮರಳಿ ಮಣ್ಣಿಗೆ ೨೦೦೧, ಪು. ೧೬೦). ಆದರೆ ಅದೇ ಲಚ್ಚ ಶಿಕ್ಷಣ ಪಡೆದ ಬಳಿಕ ಜಮೀನಿನ ಬಗ್ಗೆ ಯಾವ ಗೌರವವನ್ನು ಪಡೆದುಕೊಂಡಿಲ್ಲ. ಅದನ್ನು ಅವನು ಕಳೆದುಕೊಳ್ಳುತ್ತಾನೆ. ಅವನು ಪಡೆದುಕೊಂಡ ಶಿಕ್ಷಣ ಮತ್ತು ಅವನು ಪಡೆದುಕೊಂಡ ನೌಕರಿಯು ಯಾವುದನ್ನು ರಾಮೈತಾಳರು ಇಷ್ಟಪಟ್ಟಿದ್ದರೋ ಅದನ್ನು ನಿರಾಕರಿಸುವಂತೆ ಮಾಡಿದೆ. ಒಂದು ದೃಷ್ಟಿಯಿಂದ ಆತ ಸಾಂಪ್ರದಾಯಿಕ ಜೀವನ ಕ್ರಮಕ್ಕೆ, ಅವರ ಉತ್ಪಾದನೆಯ ಸಂಬಂಧಕ್ಕೆ ವಿದಾಯ ಹೇಳಿದ್ದಾನೆ. ಅವನಿಗೆ ಆ ವಿಷಯದಲ್ಲಿ ಯಾವ ಗೌರವವೂ ಉಳಿದಿಲ್ಲ. ಬೇರೊಂದು ದೃಷ್ಟಿಯಿಂದ ಹೇಳುವುದಿದ್ದರೆ ಆತನ ಪರಿವರ್ತನೆಯು ಸಾಮಾಜಿಕ ಹಿನ್ನೆಲೆಯಿಂದ ಉಂಟಾದ ಪರಿವರ್ತನೆ. ಹೊಸದಾಗಿ ಪಡೆದುಕೊಂಡ ಶಿಕ್ಷಣ ಅವನು ತನ್ನ ಪ್ರಾದೇಶಿಕ ಹಿನ್ನೆಲೆಗೆ ವಿದಾಯ ಹೇಳುವಂತೆ ಮಾಡಿದೆ. ಆ ಪ್ರಾದೇಶಿಕ ಪರಿಸರದೊಂದಿಗೆ ಆತನು ಹೇಳಿದ ವಿದಾಯವನ್ನು ಮತ್ತೆ ಮೂರನೆಯು ತಲೆಮಾರಿಗೆ ಸೇರಿದ ರಾಮನ ಆಗಮನದೊಂದಿಗೆ ಬೇರೆ ಪರಿಣಾಮವನ್ನು ಉಂಟುಮಾಡುತ್ತದೆ. ರಾಮೈತಾಳರು ಊರಲ್ಲಿ ಇದ್ದವರು. ಅವರದು ಜಮೀನುದಾರಿ

ಪದ್ಧತಿಯ ಮನೋಧರ್ಮ. ಹೆಂಗಸರ ಮಾತನ್ನು ಕೇಳಲಾರದವರು. ಆದರೆ, ಭೂಮಿ: ಪೌರೋಹಿತ್ಯದೊಂದಿಗೆ ಜೀವನವನ್ನು ನಿರ್ವಹಿಸಿದವರು. ಅದು ಅರ್ಥ ಹೀನವೆಂದು ಅವರಿಗೆ ಅನಿಸಿಲ್ಲ. ಎರಡನೆಯ ತಲೆಮಾರಿಗೆ ಸೇರಿದ ಲಚ್ಚ ಇದೆಲ್ಲವನ್ನು ಬಿಟ್ಟು ವಿದಾಯ ಹೇಳಿದವನು. ಮೂರನೆಯ ತಲೆಮಾರಿಗೆ ಸೇರಿದ ರಾಮನದು ಆಗಮನ. ಹೀಗೆ ವಿದಾಯ ಮತ್ತು ಆಗಮನವೆಂದು ಎರಡು ಪ್ರಕ್ರಿಯೆಗಳು ಇಲ್ಲಿ ಜರುಗುತ್ತವೆ. ಊರಿಗೆ ವಿದಾಯ ಮತ್ತು ಊರಿಗೆ ಆಗಮನವೆಂದು ನಡೆಯುವ ಈ ಪ್ರಕ್ರಿಯೆಗಳು ನವೋದಯದ ಸಂದರ್ಭದಲ್ಲಿ ಪ್ರಮುಖ ಪರಿಕಲ್ಪನೆಯಾಗಿ ಕೆಲಸಮಾಡಿದೆ. ಈ ಕಾದಂಬರಿಯಲ್ಲಿ ಮೂಲಭೂತವಾಗಿ ಒಂದು ಕುಟುಂಬ: ಅದರ ಸಂಪ್ರದಾಯಗಳು: ಅದು ಭೂಮಿಯ ಜೊತೆಗೆ ಇಟ್ಟುಕೊಂಡ ಸಂಬಂಧಗಳು ಮುಖ್ಯವಾಗಿದೆ. ಬ್ರಾಹ್ಮಣ ಜನಾಂಗದ ವಿವರಗಳು ಈ ಕಾದಂಬರಿಯಲ್ಲಿ ಬರುತ್ತದೆಯೆಂಬ ಕಾರಣಕ್ಕೆ ಈ ಕಾದಂಬರಿಯನ್ನು ಪ್ರಗತಿವಿರೋಧಿಯಾದ ಕಾದಂಬರಿಯೆಂದು ಕರೆಯಬೇಕಾಗಿಲ್ಲ. ಈ ಕಾದಂಬರಿಯನ್ನು ವಿಶ್ಲೇಷಿಸಲು ಬಳಸಿಕೊಂಡ ಸಾಮಾಜಿಕ ವಾಸ್ತವದ ಎರಡು ಪರಿಕರಗಳೆಂದರೆ – ಒಂದು ಪ್ರಾದೇಶಿಕ ಸಂಸ್ಕೃತಿ ಮತ್ತು ಎರಡನೆಯದು ಜಾತಿ. ಈ ಎರಡು ಉಪಕರಣಗಳನ್ನು ಇಟ್ಟುಕೊಂಡು ಬಹಳ ಜನ ವಿದ್ವಾಂಸರು 'ಮರಳಿ ಮಣ್ಣಿಗೆ ' ಕಾದಂಬರಿಯನ್ನು ವಿಫಲ ಕಾದಂಬರಿಯೆಂದು ಕರೆಯುವುದಕ್ಕೆ ಪ್ರಯತ್ನಿಸಿದ್ದಾರೆ. ಈ ಕಾದಂಬರಿಯಲ್ಲಿ ಬರುವ ಕಡಲಿನ ಜೊತೆಗೆ ಮತ್ತು ಭೂಮಿಯ ಜೊತೆಗೆ ನಿಜವಾದ ಸಂಬಂಧವೇ ಸಾಧ್ಯವಾಗುವುದಿಲ್ಲವೆಂದು ಕೆಲವು ವಿಮರ್ಶಕರು ಹೇಳುವ ಪ್ರಯತ್ನವನ್ನೂ ಮಾಡಿದ್ದಾರೆ. ಇಲ್ಲಿ 'ಮರಳಿ ಮಣ್ಣಿಗೆ'ಯ ಕಥಾನಾಯಕ ರಾಮು, ಕಥಾ ಪ್ರಧಾನವಾದ ಕಡಲಿನಿಂದ ಸಂಪೂರ್ಣವಾಗಿ ಪ್ರಭಾವಿತವಾಗಿ, ಕಡಲಿನ ಒಡನಾಡವೇ ಜೀವನದ ದಾಟಿಯನ್ನಾಗಿ ಮಾಡಿಕೊಂಡಿದ್ದಾಗ್ಯೂ, ಅವನು ಕಡಲನ್ನು ಒಂದೇ ಒಂದು ಸಂದರ್ಭದಲ್ಲಿಯಾದರೂ ಮುಟ್ಟುವುದಿಲ್ಲ – ಅಂದರೆ ಅದರ ನೀರಿನೊಂದಿಗೆ ಚೆಲ್ಲಾಟವನ್ನಾಗಲೀ, ಅದರ ತೆರೆಗಳಿಗೆ ಆಟವಾಡುವುದಾಗಲೀ, ಮೀಯುವುದಾಗಲೀ, ಈಜುವುದನ್ನಾಗಲೀ ಅಥವಾ ಅದನ್ನು ದೋಣಿಯಲ್ಲಿ ಹಾಯುವುದಾಗಲೀ, ಸವಾರಿಮಾಡುವುದಾಗಲೀ – ಈ ಯಾವ ವಿಧವಾದ ಸ್ಪರ್ಶ ಸಂಬಂಧವೊಂದನ್ನು ಅನುಭವಿಸುವುದಿಲ್ಲ. ಅಜ್ಜ ರಾಮೈತಾಳ ಕಡಲು ಹಾಯ್ದು, ಈಜಿ, ವೈದಿಕ ಮಾಡುತ್ತಾನೆ. ತಾಯಿ ನಾಗವೇಣಿ ಕಡಲಿಗೆ ಬಿದ್ದು ಸತ್ತು ಬದುಕುತ್ತಾಳೆ. ಆದರೆ ಕಡಲ ಕನಸುಗಾರ, ಕಡಲೊಡನಾಡಿ, ಕಡಲ ದಾರ್ಶನಿಕನಾಗಿಯೇ ತನ್ನ ವ್ಯಕ್ತಿತ್ವದ ಅಸ್ತಿತ್ವವನ್ನು ಗಳಿಸಿಕೊಳ್ಳುವ ರಾಮ ನೀರಿಗಿಳಿಯುವುದಿಲ್ಲ. ಅಂದಾಗ ಕಡಲು ಹೇಗೆ ಒಂದು ಸಂಕೇತವಾಗಿ ಅಥವಾ ಪರಿಕಲ್ಪನೆಯಾಗಿಯೇ ವ್ಯಂಜಿತವಾಗುತ್ತದೆಯೆಂದಾಗಲೀ, ಅನುಭವ ನಿಜವಾಗುವುದಿಲ್ಲ. ಸ್ಪರ್ಶ ದಿವ್ಯದಲ್ಲಿ ಸಾರ್ಥಕವಾಗುವುದಿಲ್ಲವೆನ್ನುವುದು ಗಮನಾರ್ಹ. ಇಲ್ಲ, ಕಾರಂತರು ನೀರಿಗಿಳಿಯುವುದಿಲ್ಲ; ಏಕೆಂದರೆ ನೀರಿಗಿಳಿದರೆ ಸಾವು, ನಾಗವೇಣಿಗಾದಂತೆ ಅಥವಾ ಸಾವಿನ ಬಾಳು, ರಾಮೈತಾಳನ ವೈದಿಕ್ಯ (ಶ್ರಾದ್ಧ

ಜೀವನ)ದಂತೆ" (ಪೋಲಂಕಿ ರಾಮಮೂರ್ತಿ – ಕಾದಂಬರಿಕಾರರಾಗಿ ಕಾರಂತ, ಪು. ೯೩–೯೪) ಪೋಲಂಕಿ ರಾಮಮೂರ್ತಿಯವರು ಹೇಳುವಂತೆ ನಿಸರ್ಗ ಮತ್ತು ಮನುಷ್ಯರ ಬದುಕು ಇಲ್ಲಿ ತಾದಾತ್ಮ್ಯವನ್ನು ಹೊಂದಿಲ್ಲ. ಆದರೆ ಅವರ ವಿಮರ್ಶಾತ್ಮಕ ನಿಲುವು ಅಷ್ಟೊಂದು ಸಮಂಜಸವಾಗಿಲ್ಲ. ಮತ್ತು ಈ ಪ್ರಶ್ನೆಯು ಈ ಕಾದಂಬರಿಯಲ್ಲಿ ಪ್ರಮುಖವಾದ ಪ್ರಶ್ನೆಯಾಗಿ ಒಡಮೂಡುವುದಿಲ್ಲ. ಇದೇ ಕಾದಂಬರಿಯಲ್ಲಿ ಭೂಮಿಯ ಪ್ರಶ್ನೆಯು ಪ್ರಮುಖವಾಗಿದೆ. ಸಾಂಪ್ರದಾಯಿಕ ಸಮಾಜದಲ್ಲಿ ಭೂಮಿಯೆನ್ನುವುದು ಸಂಪತ್ತಿನ ಸಂಕೇತವಾಗಿತ್ತು. ಇದರ ನಿಯಮಗಳು ಬೇರೆ ಬೇರೆ ಕಾರಣಗಳಿಗಾಗಿ ಬ್ರಿಟೀಶರ ಕಾಲಘಟ್ಟದಲ್ಲಿ ಬದಲಾಯಿತು. ಸಾಂಪ್ರದಾಯಿಕ ಸಮಾಜದಲ್ಲಿ ಜಮೀನಿನ ಹಕ್ಕು ಮತ್ತು ರಾಜಕೀಯ ಅಧಿಕಾರದ ಜೊತೆಗೆ ಪಡೆದುಕೊಂಡ ಸಂಬಂಧ ಪ್ರಮುಖವಾಗಿತ್ತು. ಈ ಕಾರಣಕ್ಕಾಗಿಯೇ ಗ್ರಾಮೀಣ ಜನಸಮುದಾಯವನ್ನು 'ಕಿರುಗಣರಾಜ್ಯ' (Little Republic) ಎಂದು ಬ್ರಿಟೀಶರು ಕರೆದರು. ಈ ಗ್ರಾಮೀಣ ಜನಸಮುದಾಯವನ್ನು ಪ್ರಮುಖವೆಂದೂ ಕರೆಯಲಾಗಿತ್ತು. ಕಾರಂತರ 'ಮರಳಿ ಮಣ್ಣಿಗೆ ' ಕಾದಂಬರಿಯು ಈ ಪ್ರಕ್ರಿಯೆಯನ್ನು ಗುರುತಿಸುತ್ತದೆ. ಪ್ರಾದೇಶಿಕವಾಗಿ ಬದಲಾಗುತ್ತಿರುವ ಪರಿಸರ ಮತ್ತು ವ್ಯಕ್ತಿಯ ನಡುವಣ ಸಂಬಂಧವನ್ನು ಒಂದು ದೃಷ್ಟಿಯಿಂದ ಕಾದಂಬರಿಯು ನಿರ್ವಚಿಸಲು ಪ್ರಯತ್ನಿಸುತ್ತದೆ. ಈ ಕಾರಣದಿಂದ ಮೂರು ತಲೆಮಾರಿಗೆ ಸಂಬಂಧಿಸಿದ ಈ ಕಾದಂಬರಿಯಲ್ಲಿ ಬದಲುಗೊಂಡ ಪ್ರಾದೇಶಿಕ ಸಂಸ್ಕೃತಿಯೂ ಇದೆ.

'ಮರಳಿ ಮಣ್ಣಿಗೆ ' ಕಾದಂಬರಿಯಲ್ಲಿ ಬ್ರಾಹ್ಮಣ ಕುಟುಂಬವೇ ಕೇಂದ್ರವಾಗಿದೆ ಮತ್ತು ಅದರ ಸುತ್ತ ಉಳಿದ ಜನಾಂಗಗಳ ವಿವರಗಳು ಬರುತ್ತವೆಯೆಂದು ಕೆಲವರು ವಿವರಿಸಿ, ಇದೊಂದು ಪುರೋಹಿತಶಾಹಿ ಸಂಸ್ಕೃತಿಯ ಪರವಿರುವ ಕಾದಂಬರಿಯೆಂದು ತರ್ಕವನ್ನು ಹೂಡಿದ್ದಾರೆ ಮತ್ತು ಈ ಕಾರಣದಿಂದಲೇ ಈ ಕಾದಂಬರಿಯು ಮಹತ್ವದ ಕೃತಿಯಲ್ಲವೆಂತಲೂ ಹೇಳಿದ್ದಾರೆ. ಇಷ್ಟೊಂದು ಸುಲಭವಾಗಿ 'ಮರಳಿ ಮಣ್ಣಿಗೆ' ಕಾದಂಬರಿಯನ್ನು ತಳ್ಳಿಹಾಕಲು ಸಾಧ್ಯವೇ? ಇದನ್ನು ಪರಿಶೀಲಿಸಬೇಕಾದ ಅಗತ್ಯವಿದೆ. ಕಾರಂತರು 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಬ್ರಾಹ್ಮಣ ಜನಾಂಗವನ್ನು ಕುರಿತು ಬರೆದಿದ್ದಾರೆ ಎನ್ನುವುದರಿಂದ ಅದು ಅರ್ಥಹೀನವಾದ ಕಾದಂಬರಿಯೆಂದು ಕರೆಯುವುದು ಸಾಧುವಾದುದಲ್ಲ. 'ಪ್ರಗತಿಪರ ವಿಚಾರಧಾರೆಯ ಅರ್ಥ ಶಾಸ್ತ್ರಜ್ಞರು – ಜಾತಿಯು ಪ್ರಗತಿಗೆ ಅಡ್ಡಬರಬಹುದು ಎಂದು ತಿಳಿದಿಲ್ಲ. ಯಾಕೆಂದರೆ ಜಾತಿಯನ್ನು ಅವರು ಪ್ರಗತಿವಿರೋಧಿಯಾದ ಚಟುವಟಿಕೆಯೆಂದು ಅವರು ಭಾವಿಸಿಲ್ಲ. ಜಾತಿಗೂ ಮತ್ತು ವರ್ಗಕ್ಕೂ ಅನೇಕ ಸಂದರ್ಭಗಳಲ್ಲಿ ಯಾವ ಸಂಬಂಧವೂ ಇಲ್ಲ" ಎಂದು ಒಂದು ಸಂದರ್ಭದಲ್ಲಿ ರಜನಿಕೊಠಾರಿಯವರು ಹೇಳುತ್ತಾರೆ. ಹೀಗಾಗಿ ವಾಸ್ತವವೆನ್ನುವುದು ಸಂಕೀರ್ಣವಾಗಿದೆ. ಮತ್ತು ಅದನ್ನು ಸಾಮಾನ್ಯೀಕರಣಗೊಳಿಸುವುದು ಸರಿಯಲ್ಲ. ಪ್ರಾದೇಶಿಕವಾಗಿ ಜಾತಿಯ ಯಜಮಾನಿಕೆಯ ರೂಪಗಳು ಬೇರೆಯಾಗುತ್ತವೆ. ಹೀಗಾಗಿಯೇ

ವರ್ಣವೆಂಬ ಪರಿಕಲ್ಪನೆಗೆ ಇರುವ ತರ್ಕವನ್ನು ಹಾಗೆಯೇ ಯಥಾವತ್ತಾಗಿ ಜಾತಿಗೂ ಅನ್ವಯಿಸಲು ಬರುವುದಿಲ್ಲ. ಕಾರಂತರು ಈ ಕಾದಂಬರಿಯ ಕುರಿತು ಹೇಳುವ ವಿಚಾರಗಳು ಗಮನಾರ್ಹ. ಅಲ್ಲಿ ಚಿತ್ರಿಸಿದ ಮೂರು ತಲೆಮಾರುಗಳ ಕತೆಯು ನನ್ನ ಅಜ್ಜಿಯ ಕಾಲದಿಂದ ತೊಡಗುವ ಚಿತ್ರವು, ಕಾಲಮಾನದ ದೃಷ್ಟಿಯಿಂದ ನನ್ನ ತಲೆಮಾರಿಗೆ ಬಂದು ಮುಟ್ಟುತ್ತದೆ. ಮೊದಲ ತಲೆಮಾರಿನವರು ನಿಸರ್ಗದಿಂದ ಸಂತೋಷಪಡಲಿಲ್ಲ. ಕಡಲಿನೊಡನೆ, ನದಿಯೊಡನೆ ಸೆಣಸಾಡಿ, ತಮ್ಮ ನೆಲಕ್ಕೆ ಬೆವರನ್ನು ಸುರಿಸಿ ಅನ್ನಕ್ಕಾಗಿ ಶ್ರಮಿಸಿದರು. ಆಗ ತುಂಬಿದ ಬಡತನ ಅವರದು. ಬಡತನದ ಜಂಜಾಟವನ್ನು ಮರೆಯುವುದಕ್ಕೆ ಒಂದೇ ದಾರಿ – ವಿಧಿಯ ವಿಲಾಸದಲ್ಲಿ ನಂಬುಗೆ.... ಎರಡನೆಯ ತಲೆಮಾರಿನಲ್ಲಿ, ಜನಕ್ಕೆ ಇಂಗ್ಲೀಷ್ ವಿದ್ಯಾಭ್ಯಾಸದ ಗಾಳಿ ಬೀಸುತ್ತದೆ. ಒಂದು ಗುಂಪು ಹಳ್ಳಿಯನ್ನು ಬಿಟ್ಟು ಪರ ಊರುಗಳನ್ನು ಸೇರಿ, ಹೋಟೆಲ್‌ಗಳನ್ನು ನಡೆಯಿಸಿ, ಊರಿಗೆ ಹಣ ತರತೊಡಗುತ್ತದೆ.... ಇನ್ನೊಂದು ಕಡೆ ಲಚ್ಚನಂತ ವ್ಯಕ್ತಿಗಳು ಪೇಟೆಯ ಮೋಹಕ್ಕೆ ಬಲಿಬಿದ್ದು, ಹೊಸ ಆವರಣದಲ್ಲಿ ತಲೆಕೆಡಿಕೊಳ್ಳುತ್ತಾರೆ. ಇವರ ಫಾಲಿಗೂ ನಿಸರ್ಗವು ಜಡವಸ್ತುವೇ. ಮೂರನೆಯ ತಲೆಮಾರಿನಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ತೀರಾ ಸಾಮಾನ್ಯವಾಗುತ್ತದೆ. ನಿರುದ್ಯೋಗದ ಪ್ರಶ್ನೆ ಬೆಳೆಯುತ್ತದೆ. ರಾಷ್ಟ್ರದಲ್ಲಿ ಅಶಾಂತಿ ತಲೆದೋರುತ್ತದೆ. ಇವೆಲ್ಲಾ ರಾಮನಂತ ಹುಡುಗನನ್ನು ಕುಣಿಸುತ್ತವೆ. ಕೊನೆಗೆ ನಿರಾಶೆಯಿಂದ ಆತ ಹಳ್ಳಿಗೆ ಮುಖ ಮಾಡುತ್ತಾನೆ. ಇಲ್ಲೂ ಸ್ತ್ರೀಯರ ಪಾಡು ಮೊದಲಿನಂತೆಯೇ ಉಳಿಯುತ್ತದೆ ; ದುಡಿಯುವುದು ಮತ್ತು ದಣಿಯುವುದು" (ಹುಚ್ಚು ಮನಸ್ಸಿನ ಹತ್ತು ಮುಖಗಳು, ೧೯೯೮, ಪು. ೨೨೨). ಕಾರಂತರು ಹೇಳಿರುವಂತೆ ಈ ಕಾದಂಬರಿಯು ಹೇಳುತ್ತಿರುವುದು ಪಲ್ಲಟಗೊಳ್ಳುತ್ತಿರುವ ಸಾಮಾಜಿಕ ಸ್ಥಿತಿಯನ್ನು. ಕುಟುಂಬದ ಮುಖಾಂತರ ಹೊರಜಗತ್ತಿಗೆ ಪ್ರವೇಶಿಸುವ ಕ್ರಮವನ್ನು ಈ ಕಾದಂಬರಿಯು ಸೂಚಿಸುತ್ತದೆ. ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯ ಪ್ರಧಾನ ಆಸಕ್ತಿಯಿರುವುದು ಬ್ರಾಹ್ಮಣ ಜಾತಿಯ ಉತ್ಕರ್ಷ ಸ್ಥಿತಿಯನ್ನು ವರ್ಣಿಸುವುದಲ್ಲ. ಹಾಗೆಯೇ ಅದು ಬ್ರಾಹ್ಮಣ ಜಾತಿಯು ಎಷ್ಟು ಶ್ರೇಷ್ಠವಾಗಿದೆಯೆಂದು ವಿವರಿಸುವುದರಲ್ಲಿ ತನ್ಮಯಗೊಂಡಿಲ್ಲ. ಈ ಮೊದಲೇ ಹೇಳಿರುವಂತೆ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಕೌಟುಂಬಿಕ ಮೌಲ್ಯಗಳ ಪಲ್ಲಟವಿದೆಯೆಂದು ಹೇಳುತ್ತದೆ. ರಾಮೈತಾಳ ಜೀವನೋಪಾಯಕ್ಕಾಗಿ ವೈದಿಕ ಕರ್ಮಗಳನ್ನು ಒಪ್ಪಿಕೊಂಡವನು. ಈ ತರಹದ ಕುಲಕಸುಬನ್ನು ಅವನು ಸಹಜವಾಗಿ ಸ್ವೀಕರಿಸಿದವನು. ತಾನು ವೈದಿಕನಾಗಿದ್ದೇನೆ – ಪುರೋಹಿತಕರ್ಮ ಮಾಡುತ್ತೇನೆ ಎಂಬುದನ್ನು ಅವನು ಹೇಗೆ ಒಪ್ಪಿಕೊಂಡಿದ್ದಾನೋ, ಮುಂದಿನ ತಲೆಮಾರಿನಲ್ಲಿ ಈ ವೈದಿಕ ಕರ್ಮಗಳು ಉಪಯುಕ್ತವಾದುದಲ್ಲ ಎಂಬುದನ್ನು ಅರಿತುಕೊಂಡವನು. ಜೀವನೋಪಾಯಕ್ಕಾಗಿ ಈ ಮಾದರಿಯ ವೈದಿಕ ಧರ್ಮ ಒಪ್ಪಿಕೊಂಡವನಾದ ರಾಮೈತಾಳ ಅದಕ್ಕಾಗಿ ಪಾಪಪ್ರಜ್ಞೆಯನ್ನು ಅನುಭವಿಸುವುದಿಲ್ಲ. ತನ್ನ ಕುಲಧರ್ಮವು ಅವನಿಗೆ ಸಹಜವಾಗಿದೆ. ಜೀವನೋಪಾಯಕ್ಕಾಗಿ ಜಾತಿ–ಕುಲಗಳನ್ನು

ಒಪ್ಪಿಕೊಂಡವನನ್ನು ಜೀವವಿರೋಧಿಯೆಂದು ಕರೆಯಬರುವುದಿಲ್ಲ. ಕೆಲವು ವಿಷಯಗಳು ಮುಕ್ತವೂ ಹೌದು. ಪಲ್ಲಟವನ್ನು ಒಪ್ಪಿಕೊಳ್ಳುವಂತಹದೂ ಹೌದು. ಈ ದೃಷ್ಟಿಯಿಂದ ಮೇಲುಜಾತಿಗೆ ಸೇರಿದ ರಾಮೈತಾಳ ಉಗ್ರವಾದಿಯಲ್ಲ. ವಸಾಹತುಶಾಹಿ ಕಾಲಘಟ್ಟದಲ್ಲಿ ಬಂದ ಆಧುನಿಕ ಶಿಕ್ಷಣವನ್ನು ಮೇಲುಜಾತಿಯವರು ಒಪ್ಪಿಕೊಂಡರು ಹಾಗೂ ಮೇಲುಜಾತಿಯವರು ಈ ದೃಷ್ಟಿಯಿಂದ ಜಾತಿಪ್ರಜ್ಞೆಯನ್ನು ಎತ್ತಿಹಿಡಿಯುವ ಉಗ್ರವಾದಿಗಳಾಗಿರಲಿಲ್ಲ. ಆಧುನಿಕ ಶಿಕ್ಷಣ ಕ್ರಮವನ್ನು ಒಪ್ಪಿದ ದೆಸೆಯಿಂದ ಇದು ಸಾಧ್ಯವಾಯಿತು ಎಂದು ಈಗಾಗಲೇ ಸಮಾಜಶಾಸ್ತ್ರಜ್ಞರು ಒಪ್ಪಿಕೊಂಡಿದ್ದಾರೆ. (Rajani Kothari) ಹಾಗೂ ರಾಮೈತಾಳನು ವೈದಿಕ ಕರ್ಮವನ್ನು ಮಾಡುವುದು ಅವನ ಮಟ್ಟಿಗೆ ಸಹಜವೂ ಹೌದು. ಎಲ್ಲಕ್ಕಿಂತ ಹೆಚ್ಚಾಗಿ ಮೊದಲ ತಲೆಮಾರಿಗೆ ಸೇರಿದ ರಾಮೈತಾಳ ರಾಷ್ಟ್ರೀಯ ವಾದಿಯಲ್ಲ. ಈ ತರಹದ ರಾಷ್ಟ್ರೀಯವಾದದ ಪ್ರಭಾವವು ಅವನ ಮೊಮ್ಮಗ ರಾಮನ ಮೇಲೆ ಆಗಿದೆ. ವಾಸ್ತವವಾಗಿ ಭಾರತದಲ್ಲಿ ರಾಷ್ಟ್ರೀಯವಾದಿಗಳು ಭಾರತದ ಜಾತಿಪದ್ಧತಿಯನ್ನು ನಿರಾಕರಿಸಿದರು. ಹಾಗೂ ಅದೇ ಜಾತಿ ಪದ್ಧತಿಯು ಭಾರತದ ಏಕತೆಗೆ ಅಪಾಯತರುವ ಸಂಗತಿಯಾಗಬಹುದು ಎಂದು ಅವರು ಭಾವಿಸಿದ್ದರು. ಹಾಗಲೂ ಜಾತಿ ಪದ್ಧತಿಯನ್ನು ಆಧುನಿಕ ಪೂರ್ವ; ಬಂಡವಾಳವಾದಿ ಯುಗದ ಪೂರ್ವವೆಂದು ಅವರು ಭಾವಿಸಿಕೊಂಡಿದ್ದರು. ಆದರೆ ಭಾರತದಲ್ಲಿ ಜಾತಿಯೆಂಬುದು ಒಂದು ವಾಸ್ತವ ಮತ್ತು ಅದರಲ್ಲಿ ವಿವಿಧತೆ ಇದೆ. ಹಾಗೂ ಇದೇ ಕಾರಣಕ್ಕೆ ಭಾರತವು ಪಶ್ಚಿಮಕ್ಕಿಂತ ಬೇರೆಯಾಗಿದೆ. ಹಾಗೂ ಭಾರತದಲ್ಲಿ ಜಾತಿಗೆ ಅದರದೇ ಆದ ಗುಣಗಳಿವೆ ಹಾಗೂ ಅವಗುಣಗಳಿವೆ. ಮತ್ತು ಜಾತಿಯೆಂಬುದು ಅದರದೇ ಆದ ನಿರ್ದಿಷ್ಟವಾದ ವ್ಯಾಖ್ಯಾನಗಳನ್ನು ಮಾಡಿಕೊಳ್ಳುತ್ತವೆ. ಮೇಲೆ ಉಲ್ಲೇಖಿಸಿದ ಸಂಗತಿಗಳ ಕಾರಣದಿಂದ – ರಾಮೈತಾಳ ಅವನದೇ ಆದ ದುಡಿಮೆಯನ್ನು ಮತ್ತು ಜೀವನ ಧರ್ಮವನ್ನು ಇಟ್ಟುಕೊಂಡಿದ್ದಾನೆ. ಅವನ ಜೀವನ ಧರ್ಮವು ಲಚ್ಚನದಲ್ಲ. ಇಂಗ್ಲೀಷ್ ಶಿಕ್ಷಣ ಪಡೆದುಕೊಂಡು ಊರೂರು ಅಲೆಯುತ್ತಾ ಖಾಸಗಿ ಜೀವನದಲ್ಲಿ ಯಾವುದೇ ಮೌಲ್ಯಗಳಲ್ಲಿ ನಂಬಿಕೆ ಇರಿಸಿಕೊಳ್ಳದ ಆತ ಹುಸಿಯಾಗಿ ಬಾಳುತ್ತಾನೆ. ಮೂರನೇ ತಲೆಮಾರಿಗೆ ಸೇರಿದ ರಾಮನದು ಒಂದು ಜೀವನಾದರ್ಶ ಇಟ್ಟುಕೊಂಡ ಜೀವ. ರಾಷ್ಟ್ರೀಯ ಆಂದೋಲನದಲ್ಲಿ ಭಾಗವಹಿಸಿ ಅನಂತರ ಅವನು ನಿರುತ್ಸಾಹಗೊಂಡುದು ಅವನ ಜೀವನಕ್ಕೆ ಒಂದು ಪಲ್ಲಟವನ್ನು ತಂದಿತು ಎಂದೇ ಕಾದಂಬರಿಯು ಹೇಳುತ್ತದೆ. ಈ ಮಾದರಿಯು ವೈಚಾರಿಕ ಮಾದರಿಗಳಿಗಿಂತ ಹೊರತಾಗಿ ನಿಂತವರು ಸರಸೋತಿ, ಪಾರೋತಿಯಂಥವರು. ಆದುದರಿಂದಲೇ 'ಮರಳಿ ಮಣ್ಣಿಗೆ' ಕಾದಂಬರಿಗೆ ಕನ್ನಡದ ಕಾದಂಬರಿಯ ಕ್ಷೇತ್ರದಲ್ಲಿ ಮಹತ್ವದ ಪಾತ್ರವು ದೊರೆತಿದೆ.

ಕಳೆದ ಶತಮಾನದ ಮಹತ್ವದ ಕಾದಂಬರಿಕಾರರಲ್ಲಿ ಒಬ್ಬರಾದ ಕಾರಂತರು ಕಾದಂಬರಿಗಳು ಬದಲಾಗುತ್ತಿರುವ ಸಮಾಜವನ್ನು ಬೇರೆ ಬೇರೆ ಕೋನಗಳಲ್ಲಿ ಹಿಡಿದಿಟ್ಟರು.

ವ್ಯಕ್ತಿಯೊಬ್ಬನ ಮೇಲೆ ಉಂಟುಮಾಡುತ್ತಿರುವ ಬದಲಾವಣೆಗಳು ಆಕಸ್ಮಿಕವಲ್ಲ ಎಂಬ ಅರಿವು ಕಾರಂತರ ಕಾದಂಬರಿಗಳಲ್ಲಿದೆ. ಬದಲಾಗುತ್ತಿರುವ ಸಾಮಾಜಿಕ ಪರಿಸರ ; ಜೀವನೋಪಾಯದ ದುಡಿಮೆ ; ಅದರ ಕಷ್ಟಗಳು ; ಗಂಡ – ಹೆಂಡಿರ ನಡುವಣ ವಿರಸ ಇತ್ಯಾದಿಗಳನ್ನು ಕಾರಂತರ ಕಾದಂಬರಿಗಳು ಗಮನಿಸುತ್ತವೆ. ವಸಾಹತುಶಾಹಿ ಅನುಭವದ ಕಾಲಘಟ್ಟದಲ್ಲಿ ಉಂಟಾದ ಪಲ್ಲಟಗಳ ವಿಭಿನ್ನ ಮುಖಗಳು ಅವರ ಕಾದಂಬರಿಗಳಲ್ಲಿ ಚಿತ್ರಿತವಾಗಿದೆ. ಆದುದರಿಂದಲೇ ಕಾರಂತರ ಕಾದಂಬರಿಗಳು ಕೇವಲ ಕಾದಂಬರಿಗಳಲ್ಲ – ಅವುಗಳಿಗೆ ಸಮಾಜಶಾಸ್ತ್ರೀಯವೆನ್ನಬಹುದಾದ ಮುಖ ಕೂಡಾ ಇದೆ.

# ಸ್ತ್ರೀವಾದಿ ವಿಮರ್ಶೆ : ತಾತ್ವಿಕ ವಿವೇಚನೆ

ಸ್ತ್ರೀವಾದಿ ಸಾಹಿತ್ಯವು – ಅದು ಸೃಜನೇತರ ಅಥವಾ ಸೃಜನವಾದದ್ದಿರಲಿ ಮುಖ್ಯವಾಗಿ ಈ ತನಕದ ಒಟ್ಟು ನಿಲುವು ನಂಬಿಕೆಗಳನ್ನು ಮುಖ್ಯವಾಗಿ ಪುರುಷಶಾಹಿ ಮೌಲ್ಯಗಳನ್ನು ಪ್ರಶ್ನಿಸುವಂತಹದ್ದು. ಸಿಮೋನ್ ದಿ ಬೋವಾ ಹೇಳುತ್ತಾಳೆ. "ಜಗತ್ತನ್ನು ಗಂಡು ತನಗೆ ಬೇಕಾದಂತೆ ಸೃಷ್ಟಿಸಿದ್ದಾನೆ. ಅವನ ದೃಷ್ಟಿಕೋನಕ್ಕೆ ಅನುಗುಣವಾಗಿ ಜಗತ್ತಿನ ನಿಯಂತ್ರಣವನ್ನು ಮಾಡುತ್ತಾನೆ". ಸ್ತ್ರೀವಾದಿ ಚಿಂತನಾ ಕ್ರಮವು ಮುಖ್ಯವಾಗಿ ಇಂತಹ ನೆಲೆಗಳಿಂದ ಪ್ರಾರಂಭವಾಗುತ್ತದೆ. ಜೊತೆಗೆ ಇದು ಸ್ತ್ರೀಗೆ ತನ್ನ 'ಸ್ತ್ರೀತ್ವ'ದ ಹುಡುಕಾಟದ ಪ್ರಯತ್ನವೂ ಕೂಡ ಆಗುತ್ತದೆ.

ಇಂತಹ ಸ್ತ್ರೀವಾದಿ ಸಾಹಿತ್ಯ ಹುಟ್ಟಿಕೊಳ್ಳಲು ಕಾರಣವಾದ ಕೆಲವು ಚಾರಿತ್ರಿಕ ಸಂದರ್ಭಗಳನ್ನು, ಕಾರಣಗಳನ್ನು ಹೀಗೆ ಗುರ್ತಿಸಬಹುದು.

೧. ಜಗತಿನಾದ್ಯಂತ ಎಲ್ಲಾ ಜನಾಂಗಗಳಲ್ಲಿ ಹೆಣ್ಣು ಹೆಚ್ಚು ಶೋಷಣೆಗೆ ಒಳಗಾಗಿದ್ದಾಳೆ ಎನ್ನುವ ಅರಿವು.

೨. ಬರಹಗಾರ್ತಿಯರು ವಿಮರ್ಶಕರ ಅಲಕ್ಷಕ್ಕೆ ಒಳಗಾದುದು.

೩. ಕುಟುಂಬದ ಸ್ವರೂಪದಲ್ಲಿ ಹೆಣ್ಣಿಗೆ ಕೇವಲ ಹೆರುವ ಕೆಲಸವಷ್ಟೇ ಮೀಸಲಾಗಿರುವುದು.

೪. ಸಂಸ್ಕೃತಿ, ರಾಜಕೀಯ, ಸಾಮಾಜಿಕ ಅವತರಣಿಕೆಯಲ್ಲಿ ಹೆಣ್ಣಿನ ಮೇಲೆ ಗಂಡಿನ ದಬ್ಬಾಳಿಕೆ.

೫. ಲೈಂಗಿಕ ವ್ಯವಹಾರದಲ್ಲಿ ಹೆಣ್ಣಿಗೆ ಯಾವ ಪ್ರಾಶಸ್ತ್ಯವೂ ಇಲ್ಲದಿರುವುದು.

೬. ವಿಜ್ಞಾನ, ಭಾಷೆ ಮುಂತಾದ ವಿಚಾರಗಳು ಪುರುಷ ಪ್ರಧಾನವಾಗಿರುವುದು.

೭. ಹೆಣ್ಣು, ತನಗೆ ಅರಿವಿಲ್ಲದೆ ಈ ತನಕ ಗಂಡಿನ ಅಧಿಪತ್ಯಕ್ಕೆ ಒಳಗಾಗಿರುವುದು.

೮. ಎರಡನೆ ದರ್ಜೆಯ ಪ್ರಜೆಯಾದ ಹೆಣ್ಣು ಮೂಲಭೂತವಾಗಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ. ಇದು ಎಲ್ಲಾ ಜಾತಿಯ, ಎಲ್ಲಾ ವರ್ಗಗಳಲ್ಲಿ ಕಂಡುಬರುವ ಸಮಸ್ಯೆ. ಈ ಸಮಸ್ಯೆ ಹೆಣ್ಣಿನ ಪ್ರಜ್ಞೆಯನ್ನು ನಿಯಂತ್ರಿಸುತ್ತದೆ.

ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು ಯತ್ನಿಸುವುದು.

ಮೇಲಿನ ಅಂಶಗಳನ್ನು ವಿಸ್ತೃತವಾಗಿ ವಿವೇಚಿಸುವುದು ಉಚಿತವೆನಿಸುತ್ತದೆ. ಇದರಿಂದ ಒಟ್ಟು ಸ್ತ್ರೀವಾದಿ ಸಾಹಿತ್ಯದ ತಾತ್ವಿಕ ಭಿತ್ತಿಯನ್ನು ಸ್ಥೂಲವಾಗಿಯಾದರೂ ನಮ್ಮ ಗ್ರಹಿಕೆಗೆ ತಂದುಕೊಳ್ಳಬಹುದು.

### ೧. ಶೋಷಣೆ – ಹೆಣ್ಣಿಗೆ ಸಂಬಂಧಿಸಿದಂತೆ:

ಪ್ರಪಂಚದ ಎಲ್ಲಾ ಜನಾಂಗಗಳಲ್ಲಿ ಹೆಣ್ಣಿನ ಶೋಷಣೆ ಒಂದು ಸಾಮಾನ್ಯವಾದ ಸಂಗತಿಯಾಗಿ ಅರಿವಿಗೆ ಬರುತ್ತದೆ ಮತ್ತು ಇದಕ್ಕೆ ತನ್ನದೇ ಆದ ಚರಿತ್ರೆಯಿದೆ. ಮಾರ್ಕ್ಸ್‌ವಾದಿಗಳು ಹೇಳುವ "ಸ್ತ್ರೀಯರ ಐತಿಹಾಸಿಕ ಪರಾಜಯದ" ನಂತರ ಮಾತೃಪ್ರಧಾನ ಸಂಸ್ಕೃತಿಯಿಂದ ಪಿತೃಪ್ರಧಾನ ಸಂಸ್ಕೃತಿಗೆ ಪರಿವರ್ತನೆಯಾದ ಕಾಲಾನಂತರದಿಂದಲೂ ಇದನ್ನು ಗಮನಿಸಬಹುದು. ಎಲ್ಲಾ ನಾಗರಿಕತೆಗಳಲ್ಲೂ ಕೂಡ ಹೆಣ್ಣಿನ ಬಗ್ಗೆ ಹೀನಾಯ ಕಲ್ಪನೆ, ಅಥವಾ ಎರಡನೆ ದರ್ಜೆಯ ವ್ಯಕ್ತಿಯಾಗಿ ಕಾಣುವ ಪ್ರವೃತ್ತಿ ಇದ್ದೇ ಇದೆ. ಈ ರೀತಿಯ ಸಂಗತಿಗಳೆ ಒಂದು ಸಾಮಾಜಿಕ ವ್ಯವಸ್ಥೆಯಾಗಿ ರೂಪುಗೊಂಡಿದ್ದು ಅವು ಪುರುಷನ ಪರವಾಗಿವೆ. ಈ ಒತ್ತಡದ ನಡವೆಯೆ ಆಕೆಯ ಅರಿವು ಮತ್ತು ಆಲೋಚನಾ ಕ್ರಮವು ರೂಪುಗೊಳ್ಳುತ್ತಿದೆ. . ಸಾರಾ ಅವರ 'ಚಂದ್ರಗಿರಿಯ ತೀರದಲ್ಲಿ'ಯ ಕುರಿತು ಬರೆಯಲು ಉಂಟಾದ ಕಾರಣವನ್ನು ವಿವರಿಸುತ್ತಾರೆ: 'ನಾನು ಈ ಕಾದಂಬರಿಯನ್ನು ಸುಮಾರು ೨೫ ವರ್ಷಗಳ ಹಿಂದೆ ಬರೆದೆ. ಆ ಬಳಿಕ ಚಂದ್ರಗಿರಿಯಲ್ಲಿ ಬಹಳಷ್ಟು ನೀರು ಹರಿದು ಹೋಗಿದೆ. ಹಳ್ಳಿಗಳು ಪಟ್ಟಣಗಳಾಗಿವೆ. ನಗರಗಳು ಮಹಾನಗರಗಳಾಗಿವೆ. ಆದರೆ ಮುಸ್ಲಿಂ ಮಹಿಳೆಯರ ಬದುಕಿನಲ್ಲಿ ಹೆಚ್ಚಿನ ಬದಲಾವಣೆಯೇನೂ ಕಂಡುಬರುತ್ತಿಲ್ಲ. ಜಗತ್ತು ೨೧ನೇ ಶತಮಾನದಲ್ಲಿ ಓಟವನ್ನಾರಂಭಿಸಿರುವಾಗ ಮುಸ್ಲಿಮರನ್ನು ವಿಶೇಷವಾಗಿ ಮುಸ್ಲಿಂ ಮಹಿಳೆಯರನ್ನು ಏಳನೇ ಶತಮಾನಕ್ಕೆ ಹಿಂದೂಡುವ ಒಂದು ಪ್ರವೃತ್ತಿ ಕಂಡುಬರುತ್ತದೆ (ಸಾರಾ ಅಬೂಬಕ್ಕರ್, ೨೦೦೬, ಬೆನ್ನುಡಿ).ಇದು ಒಂದು ಉದಾಹರಣೆ ಮಾತ್ರವೇ ಆಗಿದೆ.

### ೨. ಬರಹಗಾರ್ತಿಯರ ಬಗೆಗೆ ವಿಮರ್ಶಕರ ಅಲಕ್ಷ್ಯ:

ಮಹಿಳಾವಾದಿಗಳು ರಚಿಸಿರುವ ಸಾಹಿತ್ಯವನ್ನು ವಿಮರ್ಶಕರು – ಕೆಲವು ಆಕ್ಷೇಪಗಳಿರಬಹುದು– ಗುಮಾನಿಯಿಂದ ನೋಡುತ್ತಾ ಬಂದಿದ್ದಾರೆ. ಆದರೆ ಸ್ತ್ರೀವಾದಿಗಳು ಇದನ್ನು, ವಾಸ್ತವವಾಗಿ ವಿಮರ್ಶಕರು ಹೆಣ್ತನದ ಒಟ್ಟು ನಿಲುವನ್ನು ಅಲಕ್ಷ್ಯದಿಂದ ನೋಡುವ ಕ್ರಮವೆಂದು ಭಾವಿಸುತ್ತಾರೆ. ಕನ್ನಡದ ಸಂದರ್ಭದಲ್ಲಿ ನಮ್ಮ ಕೆಲವು ವಿಮರ್ಶಕರು ಮಹಿಳಾವಾದಿ ಸಾಹಿತ್ಯವನ್ನು 'ಅಡಿಗೆಮನೆ ಸಾಹಿತ್ಯ' ಎಂದು ದೂರೀಕರಿಸಿ

ನೋಡಿರುವುದನ್ನು ಇಲ್ಲಿ ನೆನೆಯಬಹುದು. ಆದರೆ ಮಹಿಳಾವಾದಿಗಳು, ಕೃತಿಯಲ್ಲಿ ಕಲಾತ್ಮಕ ಗುಣವನ್ನು ಗಮನಿಸುವ ದೃಷ್ಟಿಕೋನವೇ ಪುರುಷನಿಷ್ಠವಾದುದ್ದರಿಂದ ಇದನ್ನು ಮಹಿಳಾವಾದಿಯ ತಿಳುವಳಿಕೆಯ ಹಿನ್ನೆಲೆಯಲ್ಲಿ ವಿರೋಧಿಸುತ್ತಾರೆ. ಬರಹವನ್ನು ಪ್ರತಿಭಾ ಹೀಗೆ ಹೇಳುತ್ತಾರೆ:

**ನನ್ನ ಗುಬ್ಬಿ ಬೆಳೆ ಕಟಾವಿಗೆ**
**ಕೊಡಲಿ ಹಿಡಿದು ಬಂದವರು ಹೇಳಿ**
**ಕವನವೆಂದರೆ ಏನು?**
**ಹೇಳಿದರೆ ಇವನಿಗೆ ಅರ್ಥವಾಗುವುದೇನು? ( ಕವಿತೆ)**

ಹೆಣ್ಣು ಮತ್ತು ಅವಳ ಮಾತುಗಳು ಯಾವಾಗಲೂ ಭಿನ್ನವಾಗುತ್ತದೆ.

**೩. ಕುಟುಂಬದ ಚೌಕಟ್ಟು:**

ಫೆಮಿನಿಸ್ಟ್(=ಸ್ತ್ರೀವಾದಿ) ವಿಮರ್ಶಕರು ಮಹಿಳೆಯ ತಾಯ್ತನವು ಕೇವಲ ಆಕೆಯ ದೈಹಿಕ ಮತ್ತು ಮನಸ್ಸುಗಳಿಗೆ ಮಾತ್ರ ಸಂಬಂಧಿಸಿದ್ದಲ್ಲ. ಬದಲಾಗಿ ಅದು ಸಾಮಾಜಿಕ ಸ್ಥಿತಿಯ ಮೇಲೂ ಕೂಡ ಹೆಚ್ಚಿನ ಪರಿಣಾಮ ಬೀರುತ್ತದೆಯಾದ್ದರಿಂದ ತಾಯ್ತನವು ವಿಶೇಷ ಅರ್ಹತೆಯೆಂದು ಪರಿಭಾವಿಸುತ್ತಾರೆ. ಆದರೆ 'ತಾಯಿಯ ಪ್ರೀತಿ' ಕೇವಲ ಮನೆಯೊಳಗಿನ ವ್ಯವಹಾರವಾದ್ದರಿಂದ ಕುಟುಂಬದ ಸ್ವರೂಪವು ಬದಲಾಗಬೇಕೆಂದು ಒತ್ತಾಯಿಸುತ್ತಾರೆ. ಕೆಲವು ಚಿಂತಕಿಯರಂತೂ ಪುರುಷನು ತಾಯ್ತನವನ್ನು ಒತ್ತಾಯಿಸುವುದನ್ನು ಖಂಡಿಸಿ, ಸ್ತ್ರೀ ಗರ್ಭಧರಿಸುವುದೂ, ಬಿಡುವುದು ಅವಳ ಹಕ್ಕೆಂದು ವಾದಿಸುತ್ತಾರೆ. ವೀಣಾಶಾಂತೇಶ್ವರರ 'ಬಿಡುಗಡೆ' ಕಥಾಸಂಕಲನದ ಮೊದಲ ಕತೆ 'ಬಿಡುಗಡೆ' ಗಂಡನ ಸಾವು ನಾಯಕಿ ಸರೋಜಳ ಅಂತರಂಗದ ಮೂಲಕ ವಿವಿಧ ಭಾವನೆಗಳ ಮೂಲಕ ತೆರೆದುಕೊಳ್ಳುತ್ತದೆ. ಗಂಡನ ಸಾವು ಸರೋಜಗೆ ಒಂದು ರೀತಿಯ ಶಾಕ್ ಹುಟ್ಟಿಸಿರಬೇಕೆಂದು ಮಕ್ಕಳು ಯೋಚಿಸಿರುತ್ತಾರೆ. ಬಂದ ಹಿರಿಯರು ಅದನ್ನೇ ಯೋಚಿಸುತ್ತಾರೆ. ಆದರೆ ಹಾಗಲ್ಲ. ವಾಸ್ತವದ ಪರಿಸ್ಥಿತಿಯು ಬೇರೆಯಿದೆ. ಕತೆಯ ಕೊನೆಯ ಭಾಗದಲ್ಲಿ ಅದು ವ್ಯಕ್ತವಾಗುತ್ತದೆ:

"ಮೈ-ಮನಸ್ಸು ಹಗುರವಾದಂತಹ ಭಾವ. ಅದೆಂಥದೋ ಬಿಡುಗಡೆಯ ಸುಖದ ಭಾವ. ಎಲ್ಲ ನೋವುಗಳಿಂದ ಅಪಮಾನಗಳಿಂದ, ಹಿಂಸೆಯಿಂದ ನಿರಾಶೆಯಿಂದ, ಅನ್ಯಾಯದಿಂದ ದಬ್ಬಾಳಿಕೆಯಿಂದ ಕಳಚಿಕೊಂಡಂತಹ ಭಾವ. ತನಗೆ ದುಃಖವಾಗುತ್ತಿಲ್ಲ ಎಂದು ಆಕೆಗೆ ತಿಳಿಯುತ್ತಿದೆ. ದುಃಖವೇಕೆ ಆಗುತ್ತಿಲ್ಲವೆಂದು ಕಸಿವಿಸಿಯೂ ಆಗುತ್ತಿಲ್ಲ. ದುಃಖವಾಗುತ್ತಿದ್ದರೆ ಕಸಿವಿಸಿಯಾಗುತ್ತಿದ್ದರೆ – ಸಂತಾಪವಾಗುತ್ತಿದ್ದರೆ ಅದು ಈ ಗಂಡ ಸತ್ತು ಹೋದದ್ದಕ್ಕಾಗಿ ಅಲ್ಲ. ಆತ ಸಾಯಿಸಿದ ತನ್ನ ಅಸಂಖ್ಯ ಕನಸುಗಳಿಗಾಗಿ (ಪು.

೧೧). ಗಂಡ ಸತ್ತುದು ಸರೋಜಗೆ ಬಿಡುಗಡೆಯ ಭಾವವನ್ನು ಸೂಚಿಸುತ್ತದೆ. ಕತೆಯ ಮುಖ್ಯವಾದ ಅಂಶವಿದು. ಈ ಕತೆಯಲ್ಲಿ ಬರುವ ಕೊನೆಯ ವಾಕ್ಯವು ಅವಳ ನಿರ್ಧಾರವನ್ನು ಸೂಚಿಸುತ್ತದೆ. "ನಂತರ ಮಗ ತನ್ನನ್ನು ಕರೆಯಲು ಬರುವ ಮೊದಲೇ ಹಗುರವಾದ ದಟ್ಟವಾದ ಹೆಜ್ಜೆಗಳನ್ನಿಡುತ್ತ ಪಡಸಾಲೆಗೆ ಬಂದಳು" (ಅದೇ, ಪು. ೧೧). ಅವಳು ಪಡಸಾಲೆಗೆ ಬರುವುದು ಅವಳು ಪಡೆದುಕೊಂಡಿರುವ ಬಿಡುಗಡೆಯ ಭಾವದ ಸೂಚನೆಯಾಗಿದೆ. ಹೀಗಾಗಿ ಈ ಕತೆಯಲ್ಲಿ ಮುಕ್ತಾಯವು ತುಂಬಾ ಮಹತ್ವದ್ದಾಗಿದೆ. ಗಂಡನ ಸಾವು ಸರೋಜಳ ಜೀವನದಲ್ಲಿ ಬಿಡುಗಡೆಯಾಗುತ್ತದೆ. ಈ ಬಿಡುಗಡೆಯು ಅವಳ ಜೀವನದಲ್ಲಿ ಮಹತ್ವಪೂರ್ಣವಾದುದು ಎಂಬುದನ್ನು ಕತೆಯ ಕೊನೆಯ ಸಾಲುಗಳು ಸೂಚಿಸುತ್ತವೆ.

ಹೀಗೊಂದು ಕತೆಯಲ್ಲಿ ಬರುವ ಗಂಡು ಹೆಣ್ಣಿನ ಸಂಬಂಧಗಳಿಗೆ ಹೆಸರಿಲ್ಲ. ಅವರಿಬ್ಬರಿಗೆ ಲೈಂಗಿಕ ಸಂಬಂಧವಿದೆ. ಗಂಡು ಗಂಡನಲ್ಲ. ಹೆಣ್ಣು ಹೆಂಡತಿಯೂ ಅಲ್ಲ. ಹೆಣ್ಣು ಬಸುರಿಯಾಗುತ್ತಾಳೆ. ವೀಣಾ ಶಾಂತೇಶ್ವರರು ಈ ಸಂಬಂಧ ಸೂಚಕಗಳನ್ನು ಕುರಿತು ಹೆಣ್ಣಿನ ಬಾಯಿಯಲ್ಲಿ ಹೀಗೆ ಹೇಳಿಸುತ್ತಾರೆ.

"ಏನು, ಏನಾಗಲಿದ್ದೀಯಂತೆ ? ನಂಬದವನಂತೆ ಕೇಳಿದ ಆತ. ಆತನಿಗೆ ಆಶ್ಚರ್ಯವಾದದ್ದು ಸಹಜ. ಗಂಡ, ಹೆಂಡತಿ, ತಾಯಿ, ತಂದೆ, ಮಕ್ಕಳು ಈ ತರದ ನಿರರ್ಥಕ ಸಂಬಂಧ ಸೂಚಕ ಶಬ್ದಗಳನ್ನು ಅವರಿಬ್ಬರೂ ಎಂದೂ ಬಳಸಿರಲಿಲ್ಲ. ತಿದ್ದಿಕೊಳ್ಳುತ್ತ ಆಕೆ ಅಂದಳು. 'ನಾನು ಬಸುರಿಯಂತೆ' (ಪು. ೧೫). ಇಲ್ಲಿ ಗಂಡ, ಹೆಂಡತಿ, ತಾಯಿ, ತಂದೆ, ಮಕ್ಕಳು ಎನ್ನುವ ಸಂಬಂಧಗಳೇ ನಿರರ್ಥಕವೆಂದು ಸೂಚಿತವಾಗಿದೆ. ಈ ಸೂಚನೆಯು ಆಧುನಿಕ ಚಿಂತನೆಯ ಕ್ರಮ. ವ್ಯಕ್ತಿವಾದದಲ್ಲಿ ಮಾತ್ರವೇ ಈ ರೀತಿಯ ಚಿಂತನೆಯು ಸಾಧ್ಯ. ಕತೆಯಲ್ಲಿ "ಏನಿಲ್ಲ, ಬಹಳ ಸಿಂಪಲ್ ನನ್ನ ಹೊಟ್ಟೆಯಲ್ಲೊಂದು ಮಗು ರೂಪ ತಳೆಯುತ್ತಿದೆ. ನನಗದು ಜೀವಸಹಿತವಾಗಿರಬೇಕು ಇಷ್ಟೆ". ಮಗುವಿನ ತಾಯಿಯಾಗಬೇಕಾದರೆ ಮೊದಲು ನೀನು ಮದುವೆಯಾಗಬೇಕಿಲ್ಲವೆ ?" (ಪು. ೧೬) ಮದುವೆಯಾಗುವುದಕ್ಕೂ, ಮಗುವಿನ ತಾಯಿಯಾಗುವುದಕ್ಕೂ ಯಾವುದೇ ಸಂಬಂಧವಿಲ್ಲ ಎನ್ನುವುದು ಇಲ್ಲಿ ಪ್ರಮುಖ ಪ್ರತಿಪಾದನೆಯಾಗಿದೆ. ಈ ಕತೆಯ ಕೊನೆಯಲ್ಲಿ ಗಂಡು ನಾವಿಬ್ಬರೂ ಲಗ್ನವಾಗೋಣ ಎಂದು ಹೇಳುತ್ತಾನೆ. ಮುದ್ದಾದ ಹೆಣ್ಣು ಮಗುವನ್ನು ಹೆತ್ತ ಹೆಂಗಸು ಅವನ ಮಾತನ್ನು ಮಧ್ಯೆದಲ್ಲಿಯೇ ಕತ್ತರಿಸಿ ಹೀಗೆ ಹೇಳುತ್ತಾಳೆ.

"Sorry, ನನಗೀಗ ಯಾರ ಅವಶ್ಯಕತೆಯೂ ಇಲ್ಲ. ಯಾತರ ಅವಶ್ಯಕತೆಯೂ ಇಲ್ಲ. ನನಗೆ ಬೇಕಾದುದೆಲ್ಲ ನನಗೆ ಸಿಕ್ಕಿದೆ. ನಿನ್ನ ದಾರಿ ನೀನು ನೋಡಿಕೋ. ಇಲ್ಲಿ ಹೆಣ್ಣಿನ ವ್ಯಕ್ತಿ ಸ್ವಾತಂತ್ರ್ಯ ಎಷ್ಟು ಮುಖ್ಯವಾಗಿದೆಯೋ ಅಷ್ಟೇ ಅವಳ ಕ್ರಾಂತಿಕಾರಕ ವ್ಯಕ್ತಿತ್ವವೂ ಮುಖ್ಯವಾಗಿದೆ. ಇದರಲ್ಲಿ ಆಧುನಿಕ ಚಿಂತನೆಯು ಇದೆ. ಕುಟುಂಬವೇ ಹೇಗೆ

ಪ್ರಶ್ನಾರ್ಹವಾಗುತ್ತದೆ ಎನ್ನುವುದೂ ಕತೆಯ ತಿರುಳು.

**೪. ಸಂಸ್ಕೃತಿ, ರಾಜಕೀಯ, ಸಾಮಾಜಿಕವಾಗಿ ದಬ್ಬಾಳಿಕೆ:**

"ಸಂಸ್ಕೃತಿಯೆಂದರೆ ಅದು ಗಂಡಿನದು, ಅದರಲ್ಲಿ ಸ್ತ್ರೀಯೂ ಇದ್ದಾಳೆ. ಆದರೆ ಸ್ತ್ರೀ ಸಂಸ್ಕೃತಿಯು ಅನಧಿಕೃತವಾಗಿದೆ. ಆಕೆಯದು ಕಿರುಸಂಸ್ಕೃತಿ" ಎಂದು ಪರಿಭಾವಿಸಲಾಗಿದೆ. ಸಂಸ್ಕೃತಿಯೆಂಬುದು ಅದು ಗಂಡಿನದು ಎಂಬ ಅರ್ಥದಲ್ಲಿರುವುದಾಗಿ ಪರಿಭಾವಿಸಲಾಗಿದೆಯಾದ್ದರಿಂದ ಅದು ಏಕಮುಖವಾಗಿದೆ. ಆದರೆ ಸ್ತ್ರೀ ಸಂಸ್ಕೃತಿಯು ಅದು ಅಂತಸ್ಥವಾದುದಾಗಿದ್ದು ಎಷ್ಟೋ ವೇಳೆ ಅದು ಪುರುಷ ಸಂಸ್ಕೃತಿಯೊಳಗೆ ಅಡಗಿರುವ ಸಾಧ್ಯತೆ ಹೆಚ್ಚಾಗಿರುತ್ತದೆ. ಬಹಳಷ್ಟು ಸಲ ಎಲ್ಲಾ ಸಂಸ್ಕೃತಿಯಲ್ಲೂ ಮಹಿಳಾದನಿಯು ಕ್ಷೀಣವಾದುದಾಗಿರುತ್ತದೆ. ಆದರೆ ಮಹಿಳಾವಾದಿಗಳು ಇದನ್ನೇ ಮುಖ್ಯವಾಗಿ ಗಣಿಸುತ್ತಾರೆ. ಬಹುತೇಕ ವೇಳೆ ಮಹಿಳೆ ಪುರುಷನ ಸಾಂಸ್ಕೃತಿಕ ಪದ್ಧತಿಯನ್ನೇ ಸಹಜವಾಗಿ ಒಪ್ಪುವ ಸ್ಥಿತಿಯನ್ನೇ ನಾವು ಕಾಣುತ್ತೇವೆ. 'ಸಿರಿಯ ತೋರಿದ' ದಾರಿಯಲ್ಲಿ ಜಾನಪದ ಕತೆಯ ಆವರಣವಿದೆ. ಇದು ತುಳು ನಾಡಿನ ಶಿಷ್ಟ ಕತೆಯಲ್ಲ. ತುಳುನಾಡಿನ ಜಾನಪದ ಕತೆಯ ಹಿನ್ನೆಲೆಯಲ್ಲಿರುವ ಲಿಂಗ ರಾಜಕಾರಣವನ್ನು ಈ ಕತೆಯು ಪ್ರತಿನಿಧಿಸುವಾಗ ಅದಕ್ಕೆ ಸಾರ್ವತ್ರಿಕತೆಯೂ ಇದೆ. 'ತನ್ನ ಸತ್ಯಲೋಕದ ಮಗಳು ಸಿರಿ ಬೆಂಕಿಯಂತೆ. ಲೋಕದ ಎಲ್ಲ ಹೆಣ್ಣು ಮಕ್ಕಳ ನೋವು – ಸಂಕಟದ ಅರಿವು ಆಕೆಗೆ ಇದೆಯೆನ್ನುವುದು ಅವಳ ಮಾತಿನಲ್ಲಿ ಸ್ಪಷ್ಟ. ಬೆಂಕಿಯಂಥ ಆ ಮಗಳನ್ನು ಸರಿಯಾಗಿ ಬಳಸಿಕೊಂಡರೆ ಆಕೆ ಬೆಳಕು ನೀಡಿಯಾಳು. ... ತಪ್ಪಿದೆಯಾ ಸುಟ್ಟು ಭಸ್ಮ ಮಾಡಿಯಾಳು ... ಇರಲಿ ಸಾಕು ಅಬಲ ಹೆಣ್ಣು ಮಕ್ಕಳಿಗೆ ಆಕೆಯಿಂದ ಒಳ್ಳೆಯದಾಗುವುದಾದರೆ ... " ಕತೆಯಲ್ಲಿರುವ ವಿಶ್ವಾತ್ಮಕತೆಗೆ ಇದೊಂದು ಉದಾಹರಣೆ ಮಾತ್ರ. ಸ್ಥಳೀಯ ಚೌಕಟ್ಟಿನಲ್ಲಿದ್ದೂ ಅದಕ್ಕೆ ವಿಶ್ವಾತ್ಮಕ ಅರ್ಥವಲಯವನ್ನು ತಂದುಕೊಡುವುದರ ಮೂಲಕ ನಾಗವೇಣಿಯವರು ಲೈಂಗಿಕ ರಾಜಕಾರಣದ ರೂಪವನ್ನು ಅನಾವರಣಗೊಳಿಸುತ್ತಾರೆ. 'ಸಿರಿಯು ತೋರಿದ ದಾರಿ' ಕತೆಯು ಹುಟ್ಟಿರುವುದು ಜಮೀನುದಾರಿ ಪದ್ಧತಿಯ ಸಾಮಾಜಿಕ ಸಂದರ್ಭದಲ್ಲಿ. ಈ ಜಮೀನುದಾರಿ ಪದ್ಧತಿಯ ಸಮಾಜವೆಂದರೆ ಅದು ಇಡಿಯ ಕರ್ನಾಟಕಕ್ಕೆ ಒಂದೇ ಅರ್ಥವನ್ನು ಕೊಡುತ್ತದೆಯೆಂದು ಹೇಳಲು ಬರುವುದಿಲ್ಲ. 'ಸಿರಿಯು ತೋರಿದ ದಾರಿ' ಕತೆಯ ಸಂದರ್ಭವಿರುವುದು ಊಳಿಗಮಾನ್ಯ ಪದ್ಧತಿಯ ಅರ್ಥಶಾಸ್ತ್ರದಲ್ಲಿ. ಆದರೂ ನಾಗವೇಣಿಯವರು ಸಿರಿಯನ್ನು ಕತೆಯ ಕೇಂದ್ರವಾಗಿರಿಸಿಕೊಂಡು ಅದಕ್ಕೆ ವಿಭಿನ್ನ ಹಾದಿಯನ್ನು ತೋರಿಸುತ್ತಾರೆ. 'ಸಖೀಗೀತೆ' ಕತೆಯ ಸನ್ನಿವೇಶ ಬೇರೆ ಬಗೆಯದು. ಈ ಕತೆಯನ್ನು ಓದಿದ ತಕ್ಷಣ – ಇದು ರೊಮಾಂಟಿಕ್ ಆಗಿದೆಯೆಂದು ಅನಿಸುತ್ತದೆ. ಸಿರಿದೇವಿಗೆ ಗಂಡ – ಗಟ್ಟದ ಮಾಸ್ತ ಮಾದೇಗೌಡ ಕತೆಯನ್ನು ಹೇಳುತ್ತಾನೆ. ಈ ಕತೆಯಲ್ಲಿ ಎರಡು ಕತೆಗಳು ಒಂದಕ್ಕೊಂದು ಸೇರಿಕೊಂಡಿವೆ. ಒಂದು ಕಡೆಯಿಂದ ಕವಿ

ದಂಪತಿಗಳದು. ಮತ್ತೊಂದು ಕಡೆಯಿಂದ ಸಿರಿದೇವಿ ಮತ್ತು ಅವಳ ಗಂಡನದು. ಕವಿ ಪತ್ನಿಗೆ ಒಮ್ಮೆಯೂ ಉಡುಪಿಯನ್ನು ನೋಡಲಾಗುವುದಿಲ್ಲ. ಕವಿ ಪತ್ನಿಯ ಬಗ್ಗೆ ನಾಗವೇಣಿಯವರದು ಉದಾರವಾದ ದೃಷ್ಟಿಕೋನ. ಆ ಪಾತ್ರವನ್ನು ಲೇಖಕಿ ಕರುಣಾರ್ದ್ರವಾಗಿಯೇ ಚಿತ್ರಿಸುತ್ತಾರೆ. ತನ್ಮೂಲಕ ಕತೆಯೊಳಗೆ ಒಂದು ನಾಟಕೀಯತೆಯೂ ಸಾಧ್ಯವಾಗಿದೆ. ಸಿರಿದೇವಿ ಮತ್ತು ಆಕೆಯ ಗಂಡ; ಕವಿ ಮತ್ತು ಕವಿಯ ಹೆಂಡತಿ – ದ್ವಂದ್ವ ರೇಖೆಗಳಂತೆ ಈ ಕತೆಯಲ್ಲಿ ಚಿತ್ರಣಗೊಂಡಿದ್ದರೂ ಅಂತಿಮವಾಗಿ ನಾಗವೇಣಿಯವರಿಗೆ ಮುಖ್ಯವಾಗುವುದು – ಆಸೆಯಲ್ಲಿ ಮಣ್ಣಾದ ಕವಿ ಪತ್ನಿ.

ಲೈಂಗಿಕ ವ್ಯತ್ಯಾಸವೆನ್ನುವುದು ಬರಿಯ ಹೊಟ್ಟೆಯ ಮತ್ತು ಬಟ್ಟೆಯ ಪ್ರಶ್ನೆಯಲ್ಲ. ಅದು ಮನಸ್ಸಿಗೆ ಸಂಬಂಧಿಸಿದ್ದು. ಅದು ಪ್ರಜ್ಞೆಗೆ ಸಂಬಂಧಿಸಿದ್ದು ಮತ್ತು ಸ್ತ್ರೀತ್ವವನ್ನು ಹೊಂದಿರುವುದೆಂದರೆ ಅದು ದೌರ್ಬಲ್ಯವಾಗಿರಬೇಕಾಗಿಲ್ಲ. ಸ್ತ್ರೀತ್ವಕ್ಕೆ ಸಖೀಭಾವವಿದೆ. ಅದಕ್ಕೆ ತಾಯ್ತನದ ಸಂಭ್ರಮವಿದೆ. ಅದಕ್ಕೆ ಯಜಮಾನಿಕೆಯ ಸೊಕ್ಕೂ ಇದೆ. ಅದನ್ನು ಅಂದರೆ ಸ್ತ್ರೀತ್ವವನ್ನು ಯಾವ ರೀತಿಯಲ್ಲಿ ಪಾಪವೆಂದು ತಿಳಿದುಕೊಳ್ಳದ ಮತ್ತು ಅದನ್ನು ಹೆಮ್ಮೆಯಾಗಿ ನೋಡುವ ಕ್ರಮವೂ ನಾಗವೇಣಿಯವರಲ್ಲಿದೆ. 'ದಾನ' ಕತೆಯಲ್ಲಿ ಬರುವ 'ತಾಯ್ತನ' 'ತಾಯ್ತನ' ಕತೆಯಲ್ಲಿ ಬರುವ 'ತಾಯ್ತನ'ಕ್ಕೆ ವ್ಯತ್ಯಾಸವಿದೆ. ಬಾಣಂತನವೆನ್ನುವುದು ಸಂಭ್ರಮವಾಗಲೂ ಸಾಧ್ಯ.

"ಒಟ್ಟಾರೆ ಗುತ್ತಿನ ಒಡತಿ ಸೀತಕ್ಕೆಯವರು ನೇರ ತಾನೇ ನಿಂತು ಮಾಡುವ ಬಾಣಂತನವೆಂದರೆ ಅದು ನಿಜಕ್ಕೂ ಒಂದು ಸಾಂಪ್ರದಾಯಿಕ ಬಾಣಂತನವೆ. ಅದರಲ್ಲೊಂದು ಅಬ್ಬರದ ಕಳೆ ಇದ್ದೇ ಇದೆ. ಅಂದ ಹಾಗೆ ಗುತ್ತಿನ ಮನೆಯ ಬಾಣಂತನದ ವೈಭವ – ಅಬ್ಬರ ಊರವರಿಗೆ ತಿಳಿಯುವುದೇ ದಿನಾ ಅಲ್ಲಿಂದ ಬೀಸಿ ಬರುವ ತುಪ್ಪದಲ್ಲಿ ಬೇಯುವ ಲೇಹ್ಯ, ಸಂಬಾರಗಳ ಪರಿಮಳದಿಂದ; ಕಪಾಯ ಮದ್ದುಗಳ ಕಮಟನಿಂದ. ಅದರಲ್ಲೂ ತುಪ್ಪದಲ್ಲಿ ಹುರಿವ ಮೆಂತೆ – ಬೆಳ್ಳುಳ್ಳಿಗಳ ಪರಿಮಳಕ್ಕೆ ಬರೀ ಊರಿನ ಹೆಂಗಸರ‍್ಯಾಕೆ, ಗಂಡಸರೂ ಕೂಡಾ ಬಾಣಂತನದ ಸುಖವನ್ನೊಮ್ಮೆ ಅನುಭವಿಸಲು ಹಾತೊರೆಯಬೇಕು! ಅಂಥಾ ಹಿತವಾದ ಪರಿಮಳ ಆ ಬಾಣಂತಿ ಲೇಹ್ಯ – ಪರಿಕರಗಳದ್ದು" (ದಾನ, ಪು. ೩೫). ತಾಯ್ತನಕ್ಕೆ ಸಾಂಸ್ಥಿಕ ನೆಲೆಯಿದೆ. ಅದಕ್ಕೆ ದೇಹ ಸಂಬಂಧಿತವಾದ ಅನುಭವಗಳಿವೆ. ತಾಯ್ತನದ ಮನಸ್ಸು ಮತ್ತು ಸಮಾಜಕ್ಕೆ ಅವಿನಾಭಾವ ಸಂಬಂಧವೂ ಇದೆ. ತಾಯ್ತನದ ನಿರಾಕರಣೆಯು ನಾಗವೇಣಿಯವರ ಆಸಕ್ತಿಯಲ್ಲ. ಅದನ್ನು ಅವರು ನಿರಾಕರಿಸುವುದಿಲ್ಲ. ಅದನ್ನು ಧನಾತ್ಮಕವಾಗಿ ನೋಡುತ್ತಾರೆ.

### ೫. ಲೈಂಗಿಕತೆಯಲ್ಲಿ ಪ್ರಾಶಸ್ತ್ಯ:

ಲೈಂಗಿಕ ಚಟುವಟಿಕೆಯಲ್ಲಿ ಗಂಡು ಮುಖ್ಯವಾಗಿ ತನ್ನ ತೃಪ್ತಿಯನ್ನೇ ಪರಿಗಣಿಸುತ್ತಾನೆ ಎಂದು ಫೆಮಿನಿಸ್ಟರು ವಾದಿಸುತ್ತಾರೆ. ಮುಖ್ಯವಾಗಿ ಫ್ರೆಂಚ್ ಮಹಿಳಾವಾದಿಗಳು ಇದನ್ನು

ಬೆಂಬಲಿಸುತ್ತಾರೆ. ಅದಲ್ಲದೆ ಗಂಡು ಹಲವು ಹೆಣ್ಣುಗಳನ್ನು ಹೊಂದಬಹುದು. ಆದರೆ ಹೆಣ್ಣಿಗೆ ಇಂತಹ ಸ್ವಾತಂತ್ರ್ಯವನ್ನು ತಡೆಹಿಡಿಯಲಾಗಿದೆ. ಅಲ್ಲದೆ ಪಾವಿತ್ರ್ಯತೆ, ಪಾತಿವ್ರತ್ಯ ಮುಂತಾದ ನಂಬಿಕೆಗಳನ್ನು ಆಕೆ ಆಚರಿಸಬೇಕಿದೆ.

**೬. ಪುರುಷಪರ ವಿಜ್ಞಾನ:**

ಇದನ್ನು ಸಾಮಾನ್ಯ ವಿಜ್ಞಾನದ ಹಿನ್ನೆಲೆಯಲ್ಲಿ ಮಾತನಾಡಿದರೂ ಸಹ ಮುಖ್ಯವಾಗಿ ಫ್ರಾಯ್ಡೀಯ ಮನೋವಿಜ್ಞಾನವನ್ನು ಗುರಿಯನ್ನಾಗಿ ಹೊಂದಲಾಗಿದೆ. ಫ್ರಾಯ್ಡನ ಎಲ್ಲಾ ಸಿದ್ಧಾಂತಗಳ ಹಿಂದೆ ಪುರುಷತ್ವದ ಧ್ವನಿ ಇರುವುದನ್ನು ಯಾರೂ ಗುರ್ತಿಸಬಹುದಾಗಿದೆ. ಕಾರಣ ಫ್ರಾಯ್ಡ್ ಪುರುಷನಿಷ್ಠ ನೆಲೆಯಿಂದ ತನ್ನ ವಿವೇಚನೆಗೆ ತೊಡಗುವುದು ಇದಕ್ಕೆ ಕಾರಣ. ಆತನ ಕಾಲದ ಒಟ್ಟು ಸ್ಥಿತಿಗತಿಯೂ ಹಾಗೆಯೇ ಇದ್ದಿತು.

**೭. ಪುರುಷನಿಷ್ಠ ಭಾಷೆ:**

ಭಾಷೆಯನ್ನು ಸಾಮಾನ್ಯವಾಗಿ ಪುರುಷನಿಷ್ಠವೆಂದು ಭಾವಿಸಲಾಗಿದೆ. ಭಾಷೆಯ ಬಗ್ಗೆ ಮಾತನಾಡುತ್ತಾ 'ಗಂಡು ಭಾಷೆ' ಎಂಬ ಪರಿಭಾಷೆಯನ್ನು ಜಾರಿಗೆ ತರಲಾಗಿದೆ. ಹೆಣ್ಣು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಈ ಪುರುಷನಿಷ್ಠ ಭಾಷೆಯ ಅಥವಾ 'ಗಂಡುಭಾಷೆ'ಯ ಲಯವನ್ನು ಒಪ್ಪಿಕೊಳ್ಳುವ ಸಾಧ್ಯತೆಯಿದೆ. ಸ್ತ್ರೀವಾದಿಗಳು ಗುರ್ತಿಸುವ ಭಾಷೆಗೆ ಸಂಬಂಧಪಟ್ಟ ಕೆಲವು ಅಂಶಗಳು ಇಂತಿವೆ.

೧. ಅತ್ಯಂತ ಖಚಿತ ಸ್ಪಷ್ಟ ಹಾಗೂ ನಿರ್ದಿಷ್ಟ ಪ್ರತಿವಾದನೆಯಿರುವ ಮಾತುಗಳನ್ನು ಗಂಡುಭಾಷೆಯೆಂದು ಗುರ್ತಿಸುವುದು.
೨. ವ್ಯಾಕರಣದ ಒಟ್ಟು ಸ್ವರೂಪದಲ್ಲಿ ಗಂಡು ಸಂತಾನದ ಛಾಪು ಇರುವುದು.
೩. ವ್ಯಾಕರಣದ ಕಲ್ಪನೆಯು ಗಂಡಸರ ಮನೋಭಾವಕ್ಕೆ ತಕ್ಕಂತೆ ರೂಪುಗೊಂಡಿರುವುದು.
೪. ಸ್ತ್ರೀಯರ ಮಾತಿನಲ್ಲಿ. ಬರಹಗಳಲ್ಲಿ ಮೆದುದನಿಯು ಹೊಮ್ಮುತ್ತಿದ್ದರೆ ಗಂಡಿನ ಮಾತಿನಲ್ಲಿ ಪುರಷತ್ವವು ವ್ಯಕ್ತವಾಗುತ್ತಿರುತ್ತದೆ.
೫. ಗಂಡಿನ ಮಾತಿನಲ್ಲಿ ಆತ್ಮಾರ್ಥಕ ಧ್ವನಿಯು ಪ್ರಕಟಗೊಂಡಿರುತ್ತದೆ. ಅವನ ಸ್ವ-ಬಿಂಬವನ್ನು ಕಾಣಬಹುದು. ಆದರೆ ಸ್ತ್ರೀಯಲ್ಲಿ ಈ ಅಂಶ ಅಷ್ಟಾಗಿ ಕಂಡುಬರುವುದಿಲ್ಲ.

ಒಟ್ಟು ಸಾಮಾಜಿಕ ರಚನೆಯೇ ಪುರುಷಪರವಾಗಿರುವಾಗ ಅದರ ಉತ್ಪನ್ನವಾದ ಭಾಷೆಕೂಡ ಅದೇ ರಚನೆಗೆ ಬದ್ಧವಾಗಿರುತ್ತದೆ. ಇದನ್ನು ಮಹಿಳೆ ಕೂಡ ಅಪ್ರಜ್ಞಾಪೂರ್ವಕ ವಾಗಿ ಒಪ್ಪಿ ಸ್ವೀಕರಿಸಿರುತ್ತಾಳೆ.

## ೮. ಸ್ತ್ರೀ ಎರಡನೇ ದರ್ಜೆಯ ಪ್ರಜೆ:

ಸಮಾಜ ಆಕೆಯನ್ನು ಎರಡನೇ ದರ್ಜೆ ಪ್ರಜೆಯಾಗಿ ಮಾರ್ಪಡಿಸಿರುವುದರಿಂದಲೇ ಆಕೆ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ. ಇದರಿಂದ ವಿಮೋಚನೆಗೊಳ್ಳುವುದು ತಮ್ಮ ಹಕ್ಕೆಂದು ಮಹಿಳಾವಾದಿಗಳು ವಾದಿಸುತ್ತಾರೆ. ಈ ಸಮಸ್ಯೆಗಳು ಜೀವನದ ಎಲ್ಲಾ ರಂಗಗಳಿಗೆ ಸಂಬಂಧಿಸಿದ್ದು, ಅವುಗಳಿಗೆ ಪರಿಹಾರ ಕಂಡುಹಿಡಿಯುವುದೇ ಇಂದಿನ ಮಹಿಳಾವಾದಿಗಳ ಮುಖ್ಯ ಆಶಯವಾಗಿದೆ.

ಮೇಲೆ ಉಲ್ಲೇಖಿಸಿದ ಕಾರಣಗಳು ಅಥವಾ ಅಂಶಗಳು ಸ್ತ್ರೀವಾದ ಬರವಣಿಗೆಗೆ ಬಹುಮಟ್ಟಿಗೆ ಕಾರಣಗಳಾಗಿವೆ. ಆದರೆ ಇಲ್ಲಿ ಇನ್ನೊಂದು ಅಂಶವನ್ನು ಗಮನಿಸಬೇಕು. ಯಾವುದೇ ಬರವಣಿಗೆಗಾಗಲಿ ಅನುಭವ ಮುಖ್ಯವಾದದ್ದು. ಸ್ತ್ರೀ ಅನುಭವ ರೂಪುಗೊಳ್ಳುವುದು ಸಂಸ್ಕೃತಿ, ಬೌದ್ಧಿಕ ಮಟ್ಟ, ದೈಹಿಕ ಸ್ವರೂಪ, ಮಾನಸಿಕ ಅವಸ್ಥೆ ಮುಂತಾದವುಗಳಲ್ಲಿ. ಆದರೆ ಸಾಂಪ್ರದಾಯಿಕ ಪುರುಷಶಾಹಿ ಸಮಾಜದಲ್ಲಿ ಪ್ರಜ್ಞೆ, ಅನುಭವವನ್ನು ರೂಢಿಸಿಕೊಂಡ ಹೆಣ್ಣು ಕೂಡ ಈ ದೃಷ್ಟಿಯಿಂದ 'ಹೆಣ್ಣಾ'ಗ ಬೇಕಾದಂತಹ ಅನಿವಾರ್ಯತೆ ಇದೆ. ಆಗ ಸ್ತ್ರೀಯ ಬರವಣಿಗೆ ಸ್ತ್ರೀತ್ವದ ಪ್ರತಿನಿಧಿಯೂ ಆಗಲಿಕ್ಕೆ ಸಾಧ್ಯ.

ಸ್ತ್ರೀವಾದಿ ಸಾಹಿತ್ಯ ಸಿದ್ಧಾಂತವು ರೂಪಿತವಾಗುವುದು ಹೀಗೆ; ವಿಷಯ; ವಿಷಯದ ಅಂಶ; ಅವುಗಳಿಗೆ ಕಾರಣವಾದ ನೆಲೆ; ಜ್ಞಾನವುಂಟಾಗುವ ರೀತಿ ಮತ್ತು ಅದರ ಆಧರಣೆಗಳನ್ನು ಕುರಿತ ಶಾಸ್ತ್ರ ಭಾಗ.

ಸಾಹಿತ್ಯದ ವಿಷಯವು ಈಗಾಗಲೇ ಸಾಹಿತ್ಯದ ವಿಮರ್ಶೆಯಲ್ಲಿ ಬಹಳಷ್ಟು ಬಾರಿ ಚರ್ಚಿತವಾಗಿದೆ. ಸಾಹಿತ್ಯ ವಿಷಯದ ಅಂಶವು ಬರಹಗಾರ ; ಓದುಗ ; ಕೃತಿಯ ರೂಪ ಅದು ಪ್ರತಿನಿಧಿಸುವ ಅಂಶ ಅಥವಾ ಅದರಲ್ಲಿ ಬಳಕೆಯಾದ, ಭಾಷಾ ಮಾಧ್ಯಮದಿಂದ ನಿರ್ಧರಿತವಾಗುತ್ತದೆ. ಈ ರೀತಿಯ ಸಾಹಿತ್ಯಕ್ಕೆ ಕಾರಣವಾದ ನೆಲೆಯೂ ಕೂಡಾ ಅದನ್ನು ಒಂದರಿಂದ ಮತ್ತೊಂದ್ದಕ್ಕೆ ವ್ಯತ್ಯಾಸ ಕಲ್ಪಿಸುವುದಕ್ಕೆ ಅನುಕೂಲ ಮಾಡಿಕೊಡುತ್ತದೆ. ಕೃತಿಯ ನಿರ್ಮಿಸುವ ಶಾಸ್ತ್ರ ಸ್ತ್ರೀವಾದಿ ವಿಮರ್ಶೆ.

ಭಾಗವೂ ಕೂಡ ಕೃತಿಕಾರ, ಕೃತಿ; ಪ್ರೇಕ್ಷಕ ಓದುಗ, ಮಾಧ್ಯಮ ಇತ್ಯಾದಿಗಳಿಂದ ನಿರ್ಧರಿತವಾಗಿರುತ್ತದೆ. ಎಲಿನ್ ಮೆಸರ ಡೇವಿಡೋ ಆಕರ್ಷಕವಾಗಿ ಬಳಸುವ ಎರಡು ಪದಗಳು ಈ ಎಪಿಸ್ಟೊಮಾಲಜಿಯನ್ನು ಚೆನ್ನಾಗಿ ವಿವರಿಸುತ್ತವೆ; ೧. ನಿಯೋಗ (Agency), ೨. ನಿಲುವು (Stance).

ನಿಯೋಗದ ಅರ್ಥ ವ್ಯಾಪ್ತಿಯಲ್ಲಿ ಬರುವವರು ಸಾಹಿತ್ಯವನ್ನು ಬಲ್ಲವರು. ಸಾಹಿತ್ಯದ ಅರ್ಥ ಕ್ಷೇತ್ರವನ್ನು ವಿಸ್ತರಿಸುವವರು. ನಿಲುವು ಈ ನಿಯೋಗಿಗಳ ಸಂಬಂಧವನ್ನು ಸೂಚಿಸುತ್ತದೆ. ಸ್ತ್ರೀವಾದಿ ವಿಮರ್ಶೆ ಈ ಎರಡೂ ಹಂತಗಳಲ್ಲಿಯೂ ಕೆಲಸ ಮಾಡುತ್ತದೆ. ಸ್ತ್ರೀವಾದಿ ವಿಮರ್ಶೆಯ ನೆಲೆಗಟ್ಟಿನ ಮುಖ್ಯಾಂಶಗಳು ಕೂಡಾ ಇದೇ ವಿಷಯ: ವಿಷಯದ ವಸ್ತು: ಅದಕ್ಕೆ ಕಾರಣವಾದ ನೆಲೆ: ಅದರಿಂದ ರೂಪುಗೊಳ್ಳುವ ತಾರ್ಕಿಕ ಅಂಶಗಳು.

ಹೆಚ್ಚಿನ ಸ್ತ್ರೀವಾದಿ ವಿಮರ್ಶಕರು – 'ಬರಹಗಾರ್ತಿಯರು ಅವರ ಸೃಜನಶೀಲತೆಯ ಕ್ರಮ: ಅವರ ಬರಹಗಳಲ್ಲಿ ವ್ಯಕ್ತವಾಗುವ ಸ್ತ್ರೀ ಪ್ರಜ್ಞೆ: ಬರಹಗಾರ್ತಿಯ ಸಮಸ್ಯೆಗಳನ್ನು ಚರ್ಚಿಸಿದ್ದಾರೆ – ಈ ರೀತಿಯ ವಿಚಾರಗಳನ್ನು ಕಿರು ಸಂಸ್ಕೃತಿಯ ಹಿನ್ನೆಲೆಯಲ್ಲಿ ಉತ್ಸಾಹದಿಂದ ಚರ್ಚಿಸುವ ಎಲೈನ್ ಶೋಲ್ಡಾರ್ ಸ್ತ್ರೀ ಸಾಹಿತ್ಯದ ಸಮಗ್ರತೆಯನ್ನು ಕಂಡುಕೊಳ್ಳಲು ಯತ್ನಿಸುವುದನ್ನು ಗಮನಿಸಬಹುದು. ಸಾಮಾಜಿಕವಾಗಿ ಅನುಭವಿಸುವ ಒತ್ತಡಗಳೆಲ್ಲವೂ ಬರಹಗಳಲ್ಲಿಯೂ ಅಭಿವ್ಯಕ್ತವಾಗಿರುತ್ತದೆ. ಈಚೀನ ಕಪ್ಪು ಸ್ತ್ರೀವಾದಿ ಸಾಹಿತ್ಯವಂತೂ ಈ ದೃಷ್ಟಿಯಿಂದ ತನ್ನ ಚಾರಿತ್ರಿಕ ಮತ್ತು ಸಮಕಾಲೀನ ಯಾತನೆಗಳನ್ನು ದಾಖಲುಪಡಿಸುತ್ತದೆ.

ಸ್ತ್ರೀವಾದಿ ವಿಮರ್ಶೆ 'ನಿರ್ದಿಷ್ಟ ಕಾರಣದ ವಿಮರ್ಶೆ' ಇನ್ನೊಂದು ಅರ್ಥದಲ್ಲಿ ಇದು 'ತಾತ್ವಿಕ ಮತ್ತು ನೈತಿಕ ವಿಮರ್ಶೆ'; ಈ ವಿಮರ್ಶೆಯ ಕ್ರಾಂತಿ ಜರುಗುವುದು ಸ್ತ್ರೀ ಲೋಕದಲ್ಲಿ. ಸಾಹಿತ್ಯದ ಈ ಕ್ರಾಂತಿಯು ಸಾಹಿತ್ಯದ ವಿಮರ್ಶೆ ಮತ್ತು ವಿದ್ಯಾಭ್ಯಾಸದ ಗುರಿಯನ್ನು ಹೊಂದಿದೆ. ಸ್ತ್ರೀ ವಿಮರ್ಶೆಯನ್ನು ಅದು ತೆಗೆದುಕೊಳ್ಳುವ ಹೆಜ್ಜೆಯ ಆಧಾರದಿಂದಲೇ ಗಂಭೀರವಾಗಿ ತೆಗೆದುಕೊಳ್ಳಬಹುದಾಗಿದೆ.

ವಾಸ್ತವವಾಗಿ ಸ್ತ್ರೀವಾದಿ ವಿಮರ್ಶೆಯು ಸಾಹಿತ್ಯ ಕೃತಿಯನ್ನು ಪ್ರತಿನಿಧಿಯೆಂದು ಭಾವಿಸುತ್ತದೆ. ಪುರುಷ ನಿರ್ಮಿತ ಸಾಹಿತ್ಯ ಕೃತಿಯಲ್ಲಿ ಸ್ತ್ರೀ ಪಾತ್ರ ವಿವೇಚನೆ ಕೂಡಾ ಈ ಅರ್ಥದಲ್ಲಿ ಸ್ತ್ರೀವಾದಿ ವಿಮರ್ಶೆ ಆಗಬಲ್ಲದು, ಅಧಿಕಾರವಿರುವ ಜಗತ್ತಿನ ಒಡತಿಯಾಗಿರುವ ಹೆಣ್ಣೆ ಪಿತೃ ಸಂಸ್ಕೃತಿಯ ಅಡಿಯಾಳಾಗಿ ಪುರುಷ ನಿರ್ಮಿತ ಕೃತಿಯಲ್ಲಿ ಕಾಣಿಸಬಹುದು. "ಅಮೇರಿಕಾದ ಬಹುತೇಕ ಕಾದಂಬರಿಗಳು ಸ್ತ್ರೀ ಓದುಗರನ್ನು ಅವಲಂಬಿಸಿದೆ "ಎಂದು ಭಾವಿಸುವ ಜುಡಿತ್ ಫೆಟ್ಟರ್‌ಲೀ ಈ ಕೃತಿಗಳು ಮಾನವೀಯತೆಯನ್ನು, ಸ್ವ–ಪರಕೀಯತೆಯನ್ನು ಪ್ರಚುರಪಡಿಸುತ್ತದೆ ಎಂದು ತಿಳಿಯುತ್ತಾರೆ. ಕೃತಿಯು ಬಯಸುವ ಓದುಗ ವರ್ಗದ ಮನೋಸ್ಥಿತಿಯು ಭಿನ್ನ ಭಿನ್ನವಾಗಿರುತ್ತದೆ. ಕನ್ನಡದಲ್ಲಿಯೇ ಇದಕ್ಕೆ ಬೇಕಾದ ಉದಾಹರಣೆಯನ್ನು ಆಯ್ಕೆ ಮಾಡಿಕೊಳ್ಳಬಹುದು. ಕೆ.ಟಿ. ಗಟ್ಟಿ, ಎಂ.ಕೆ. ಇಂದಿರಾ, ಯಂಡಮೂರಿ ವೀರೇಂದ್ರನಾಥ ಮೊದಲಾದವರ ಕಾದಂಬರಿಗಳನ್ನು ಹೆಚ್ಚಾಗಿ ಸ್ತ್ರೀಯರೇ ಓದುತ್ತಾರೆ. ಶಾಂತಿನಾಥ ದೇಸಾಯಿ, ಅನಂತಮೂರ್ತಿ, ದೇವನೂರು ಮಹಾದೇವ ಮೊದಲಾದ ಕಾದಂಬರಿಕಾರರ ಕೃತಿಗಳನ್ನು 'ಪರಿಣಿತ ಓದು'ಗರು ಮಾತ್ರವೇ ಓದುತ್ತಾರೆ. ಈ ಎರಡೂ ಬಗೆಯ ಕೃತಿಯ ಓದುಗ ವರ್ಗದ ಸೈಕಾಲಜಿ ಭಿನ್ನವಾದುದು. ಮಧ್ಯಮ ವರ್ಗದ ಭ್ರಮೆಯ ನಡುವೆ ವಾಸಿಸುವ ಹೆಣ್ಣು ಮಕ್ಕಳಿಗೆ ಬೇಕಾದುದೆಲ್ಲವನ್ನು ಪೂರೈಸುವ ಮೊದಲ ವರ್ಗದ ಕಾದಂಬರಿಕಾರರ ಕೃತಿಗಳು ನಿರ್ದಿಷ್ಟ ಉದ್ದೇಶಗಳನ್ನು ಹೊಂದಿರುವಂಥವು. ಇದಕ್ಕೆ ಕಾರಣ ಮಧ್ಯಮ ವರ್ಗದ ಅತಿರಂಜಿತ ಕನಸುಗಳು, ಸಾಹಿತ್ಯವನ್ನು ಭಾಷಿಕ ಪುನರ್ ನಿರ್ಮಾಣವೆಂದು ಗ್ರಹಿಸುವ ಸ್ತ್ರೀವಾದಿ ವಿಮರ್ಶಕರು ಕೃತಿಯನ್ನು ಸೂಚನೆಯೆಂದು ಪರಿಭಾವಿಸುತ್ತಾರೆ. ಸೂಚಕನಾದ ಕೃತಿಕಾರನು ಕೃತಿಯ

ಸೂಚನೆಯ ಮುಖಾಂತರ ಓದುಗರಿಗೆ ರವಾನಿಸುತ್ತಾನೆ ಎನ್ನುವ ವಿಮರ್ಶಕರ ತಾತ್ವಿಕ ನಿಲುವನ್ನು ನಿಲುವಳಿಯನ್ನು ಒಪ್ಪುವ ಸ್ತ್ರೀವಾದಿ ವಿಮರ್ಶಕರು ಅದನ್ನು ಪುನರ್ ನಿರ್ಮಿಸುತ್ತಾರೆ ಕೂಡಾ. ಮನಶ್ಶಾಸ್ತ್ರೀಯ ದೃಷ್ಟಿಯಿಂದ ಮಹತ್ವದ ಹೆಜ್ಜೆಯಿಡುವ ಸ್ತ್ರೀವಾದಿ ವಿಮರ್ಶಕರು ಸ್ತ್ರೀತ್ವದ ಗುರುತು (Female Identity) ಭಾಷೆಯ ಮೂಲಕವೂ ನಡೆಯುತ್ತದೆ ಎಂದು ತಿಳಿಯುತ್ತಾರೆ. ಸಾಹಿತ್ಯ ಕೃತಿಯು ಅರ್ಥವನ್ನು ಹುದುಗಿಸಿಕೊಂಡಿದ್ದರೆ, ವಿಮರ್ಶೆಯು ಅದನ್ನು ನಿರಚನಗೊಳಿಸುತ್ತದೆ. ಆಧುನಿಕ ವಿಮರ್ಶಕ ಅನ್ಯ ಶಿಸ್ತುಗಳನ್ನು ಅಳವಡಿಸಿಕೊಂಡು ಕೃತಿಯನ್ನು ಓದುವಂತೆಯೇ ಫೆಮಿನಿಸ್ಟರೂ ಅನ್ಯ ಶಿಸ್ತುಗಳ ಮೂಲಕ ಕೃತಿಯನ್ನು ಓದುತ್ತಾರೆ. ಸಹಜವಾಗಿಯೇ ಇದರಿಂದ ಕೃತಿಯ ಅರ್ಥವು ನಿರಚನಗೊಳ್ಳುತ್ತಾ , ಹೊಸದಾಗಿ ನಿರ್ಮಾಣಗೊಳ್ಳುತ್ತದೆ. ವಾಸ್ತವವಾಗಿ ಇದರಿಂದ ಬೇರೆ ಬೇರೆ ತಾತ್ವಿಕ ಆಯಾಮಗಳು ಸ್ತ್ರೀವಾದಿ ವಿಮರ್ಶೆಗೂ ಲಭ್ಯವಾಗುತ್ತದೆ. ಕೃತಿಯನ್ನು ಮೊದಲಿಗೆ ಓದಿದಾಗಲೂ ಕೃತಿಯ ಸಾಹಿತ್ಯದ ಅಂಶಗಳು ನಮಗೆ ತಿಳಿಯುತ್ತದೆ ನಿಜ ಆದರೆ, ಅದು ಎಷ್ಟೋ ಕೃತಿಗಳು ಪುರುಷ ಕೇಂದ್ರಿತ ಮೌಲ್ಯಗಳನ್ನು ಪ್ರತಿಪಾದಿಸುತ್ತಿರಬಹುದು. ಹೀಗಾಗಿ, ಪುರುಷ ಅಥವಾ ಸ್ತ್ರೀಯರೇ ಬರೆದ ಕೃತಿಗಳನ್ನು ಅನ್ವಯಗೊಳಿಸುವ ಮುಖಾಂತರ ಸ್ತ್ರೀವಾದಿ ವಿಮರ್ಶೆಗೆ ಹೆಚ್ಚಿನ ಆಯಾಮ ಸಾಧ್ಯವಾಗುತ್ತದೆ. ಫ್ರೆಂಚ್ ಫೆಮಿನಿಷ್ಟರು ಸ್ತ್ರೀ ಅಭಿವ್ಯಕ್ತಿ, ಅದರ ಗುಣಗಳ ಕುರಿತಂತೆ ಹೆಚ್ಚು ಚರ್ಚಿಸಿದರೆ; ಅಮೇರಿಕನ್ ಫೆಮಿನಿಸ್ಟರು ಸಾಹಿತ್ಯ ಕೃತಿಯಿಂದ ಕೊಡುವ ಸೂಚನೆಗಳನ್ನು ಹೆಚ್ಚು ಚರ್ಚಿಸುತ್ತಾರೆ. ಆದರೆ ಎರಡೂ ಪಂಥದವರ ಮುಖ್ಯ ಲಕ್ಷಣ ಸಾಹಿತ್ಯ ಮಾಧ್ಯಮವೇ ಆಗಿದೆ. ವಸಾಹತು ಶಾಹಿ ಅನುಬವಕ್ಕೆ ಒಳಗಾದ ಸ್ತ್ರೀವಾದದ ಸಮಸ್ಯೆ ಬೇರೆ. ತಿರುಮಲಾಂಬಾ ; ಕಲ್ಯಾಣಮ್ಮ ; ಸರಸ್ವತಿ ಗೌಡ ಮುಂತಾದವರು ಮಹಿಳಾ ಸಮಸ್ಯೆಯನ್ನು ರಾಷ್ಟ್ರೀಯತೆಯನ್ನು ವಿಧವಾ ಸಮಕ ಅಕ್ಷರಾಭ್ಯಾಸವನ್ನು ಕೇಂದ್ರವಾಗಿರಿಸಿಕೊಮಡದ್ದು ಗಮನಾರ್ಹ.

ಸಂಪ್ರದಾಯಿಕ ಫೆಮಿನಿಸ್ಟರಲ್ಲಿ ಪುರುಷ ಪ್ರಪಂಚವೇ ಪರಕೀಯವಾಗಿ ಕಾಣಿಸುತ್ತದೆ. ಅದರ ಅಪಾಯವೆಂದರೆ, ಸಾಹಿತ್ಯ ಕೃತಿಯನ್ನೇ ಅಮಾನವೀಯಗೊಳಿಸುವುದು. ಯಾವುದೇ ಕೃತಿಯಲ್ಲಿ ಬರುವ ಸ್ತ್ರೀ ಪಾತ್ರವನ್ನು ಕೃತಿಯ ರೂಪದಿಂದ ಹೊರತುಪಡಿಸಿ, ಅದನ್ನೇ ಒಂದು ವರ್ತನೆಯ ಹಿನ್ನೆಲೆಯಲ್ಲಿ ಗ್ರಹಿಸುವ ಅಪಾಯ ಈ ರೀತಿಯ ವಿಮರ್ಶೆಯಾಗಿರುತ್ತದೆ. ಈ ರೀತಿಯ ಚರ್ಚೆಗಳು ಎಷ್ಟೋ ಸಾರಿ ರಾಜಕೀಯ ಉದ್ದೇಶದಿಂದಲೂ, ಪ್ರೇರಿತವಾಗಿರಬಹುದು. ಈ ತೆರನಾದ ವಿಮರ್ಶೆಗಳು ಕೃತಿಯನ್ನು ಹಸನಗೊಳಿಸುತ್ತವೆ ಕೂಡಾ. ಪುರುಷ ಬರೆದುದೆಲ್ಲವೂ ಆಮಾನವೀಯವಾಗಿ ಕಾಣಿಸಿಕೊಳ್ಳುವುದು – ಈ ವಿಮರ್ಶೆಯ ನೆಲದ ಸೃಷ್ಟಿಯಾಗಿರುತ್ತದೆ. ಕೃತಿಯ ಅರ್ಥವನ್ನು ವಿಸ್ತರಿಸುವ ನಿರಚನಗೊಳಿಸುವುದರ ಬದಲು ಈ ರೀತಿಯ ವಿಮರ್ಶೆಗಳು ಕೃತಿಗಳನ್ನು ಸಾಯಿಸಿಬಿಡುತ್ತವೆ. ಈ ಮಾತುಗಳಿಗೆ ಉದಾಹರಣೆಯಾಗಿ ಕನ್ನಡದಲ್ಲಿ ನಡೆದ ಚರ್ಚೆಯನ್ನು ಗಮನಕ್ಕೆ ತಂದುಕೊಳ್ಳಬಹುದು.

ಯು.ಆರ್. ಅನಂತಮೂರ್ತಿಯವರ ಸಂಸ್ಕಾರ ಕಾದಂಬರಿಯಲ್ಲಿ ಬರುವ 'ಚಂದ್ರಿ' ಪಾತ್ರದ ಕುರಿತಂತೆ ಕನ್ನಡದಲ್ಲಿ ವಿಸ್ತೃತವಾದ ಚರ್ಚೆ ನಡೆದಿದೆ. ಈ ಚರ್ಚೆಯ ಕೇಂದ್ರ ಬಿಂದು : ಚಂದ್ರಿಯ ಪಾತ್ರವನ್ನು ಅನಂತ ಮೂರ್ತಿಯವರು ಸೂಳೆಯ ಹಾಗೆ ಕಾಣುತ್ತಾರೆ. ವಾಸ್ತವವಾಗಿ ಈ ರೀತಿಯ ಚರ್ಚೆಯು ಕೃತಿಯ ರೂಪ, ಅದರ ಉದ್ದೇಶ ಇತ್ಯಾದಿಗಳನ್ನು ಹಸನಗೊಳಿಸಿ ಬಿಡುತ್ತದೆ. ಈ ಅನುಮಾನಗಳು ಕೃತಿಯನ್ನು ಸರಿಯಾದ ಕಡೆಗೆ ನಿರ್ದೇಶಿಸುವುದಿಲ್ಲ. ಈ ತರಹದ ಲೇಖನಗಳು ಕನ್ನಡದಲ್ಲಿ ಹೇರಳವಾಗಿ ಬಂದಿವೆ.

ಸಾಂಪ್ರದಾಯಿಕ ಸ್ತ್ರೀವಾದಿ ವಿಮರ್ಶೆಯು ಚರ್ಚಿಸಿದ ಮುಖ್ಯ ನಿಲುವುಗಳು ಕೃತಿಯ ರೂಪಕ್ಕೆ ಸಂಬಂಧಿಸಿದಂತಿದೆ. ಈ ರೂಪನಿಷ್ಠ ಚರ್ಚೆಯ ಮೂಲಕ ಸ್ತ್ರೀ ಪಾತ್ರದ ನಿರ್ವಹಣೆಯಲ್ಲಿ ಚರ್ಚೆಯನ್ನು ನಡೆಸುವುದು ಕನ್ನಡದಲ್ಲಿ ತೀರಾ ಹೊಸತೇನಲ್ಲ. ಬರಹಗಾರನ ಕುರಿತಂತೆಯೂ ಈ ಚರ್ಚೆಯು ವಿಸ್ತೃತ ರೂಪವಾಗಿ ಕಾಣಿಸಿಕೊಂಡಿತು. ಸ್ತ್ರೀ ಮನೋಭಾವದ ಕುರಿತು ಬರಹಗಾರನು ತೆಗೆದುಕೊಂಡ ನಿಲುವು : ಅದರ ಬಗೆಗಿನ ಬರಹಗಾರನ ಅಥೆಂಟಿಸಿಟಿ ಕೃತಿಯನ್ನು ಓದುವವರ ಮೇಲೆ ಕೃತಿಯ ಪರಿಣಾಮ ಅಥವಾ ಅವರ ಪ್ರತಿಕ್ರಿಯೆ ಈ ರೀತಿಯ ಸ್ತ್ರೀವಾದಿ ವಿಮರ್ಶೆಯಲ್ಲಿ ಸಾಂಪ್ರದಾಯಿಕವಾಗಿ ಕಾಣಿಸಿಕೊಳ್ಳುತ್ತದೆ. ಈ ರೀತಿಯ ವಿಮರ್ಶಾ ಪದ್ಧತಿಯು ಸ್ತ್ರೀಯ ಬಗೆಗೂ ಸರಳ ತೀರ್ಮಾನ ತೆಗೆದುಕೊಳ್ಳುತ್ತದೆ. ಸ್ತ್ರೀ ಬರಹಗಾರ್ತಿ, ಸ್ತ್ರೀ ಓದುಗ ವರ್ಗ ಸ್ತ್ರೀಯರಿಗಾಗಿ ಬರೆದ ಸಾಹಿತ್ಯ, ಸ್ತ್ರೀ ಅನುಭವವನ್ನು ಪ್ರತಿನಿಧಿಸುವ ಸಾಹಿತ್ಯ ಬರಹಗಾರ್ತಿಯರ ಶೈಲಿ ಇತ್ಯಾದಿ ಚರ್ಚೆ ಮುಂತಾದವುಗಳು ಒಂದು ಹಂತಕ್ಕೆ ನಿಂತು ಬಿಡುತ್ತದೆ.

ವಾಸ್ತವವಾಗಿ ಸ್ತ್ರೀವಾದಿ ಅಧ್ಯಯನವು ಲಿಂಗ ವ್ಯತ್ಯಾಸ ಆಧಾರಿತವಾದುದು. ಒಂದು ಸಾಹಿತ್ಯ ಮಾರ್ಗದಲ್ಲಿ, ವಿಮರ್ಶೆಯಲ್ಲಿ, ಸ್ತ್ರೀಯನ್ನು ಹೇಗೆ ಗುರುತಿಸಲಾಗಿದೆಯೆಂದು. ಪ್ರಾರಂಭವಾಗುವ ಈ ವಿಮರ್ಶಾ ಪದ್ಧತಿಯು ನಿರ್ದಿಷ್ಟ ಮಾರ್ಗವನ್ನು ಸೂಚಿಸುತ್ತದೆ ಕೂಡಾ. ಯಾವುದೇ ಕೃತಿಯಲ್ಲಿ ಸೂಚಿತವಾಗುವ ಸ್ತ್ರೀಯು ಯಾವ ರೀತಿಯಲ್ಲಿ ವರ್ತಿಸುತ್ತಾಳೆ. ಅವಳನ್ನು ಕೃತಿಕಾರನು ಯಾವ ರೀತಿಯಲ್ಲಿ ವರ್ಣಿಸುತ್ತಾನೆ, ಅವಳ ಉಡುಗೆ-ತೊಡುಗೆ ಇತ್ಯಾದಿಗಳು ಯಾವುದಕ್ಕೆ ಪೂರಕವಾಗಿವೆ ಎಂದು ಚರ್ಚಿಸಿದರೆ ಸ್ತ್ರೀವಾದಿ ವಿಮರ್ಶೆಯ ಮೊದಲ ಕೆಲಸ ಮುಗಿದಂತಾಗುತ್ತದೆ.

ಸಾಹಿತ್ಯ ಕೃತಿಯಲ್ಲಿ ಮತ್ತು ವಿಮರ್ಶೆಯಲ್ಲಿ ಸ್ತ್ರೀಯನ್ನು ಗುರುತಿಸುವುದು ಎಂದರೆ, ಮತ್ತೆ ಯಥಾ ಸ್ಥಿತಿವಾದಕ್ಕೆ ಮರಳುವುದು ಎಂದರ್ಥವಲ್ಲ. ಇಲ್ಲಿ ಚರಿತ್ರೆಯನ್ನು, ಸಂಸ್ಕೃತಿಯನ್ನು, ಸಾಮಾಜಿಕ ನಡವಳಿಕೆಯನ್ನು ಅರ್ಥ ಮಾಡಿಕೊಳ್ಳುವುದು ಎಂದರ್ಥವಷ್ಟೆ. ಫ್ರೆಂಚ್ ಫೆಮಿನಿಸ್ಟರು ಮುಖ್ಯವಾಗಿ ಲಕ್ಷಿಸಿದ್ದು ಇಷ್ಟೆ. ಸಾಹಿತ್ಯ ಕೃತಿಯಲ್ಲಿ ಪ್ರತಿನಿಧಿತವಾದ ಅಭಿಪ್ರಾಯಗಳು ಆಯಾಯ ಕೃತಿಯ ಶೈಲಿಯಲ್ಲಿ, ಅದರ ಉಪಕ್ರಮದಲ್ಲಿ ವ್ಯಕ್ತವಾಗುತ್ತಿರುತ್ತದೆ. ಇಲ್ಲಿಯೇ ಗುರುತಿಸಬೇಕಾದ ಎರಡನೆಯ ಅಂಶವೆಂದರೆ, ಕೃತಿಯೊಂದರಲ್ಲಿ ಅದು

ವ್ಯಕ್ತವಾಗುವ ರೀತಿ, ಮೂರನೆಯದಾಗಿ, ಆಲೋಚನಾ ಕ್ರಮದ ಹಿಂದಿನ ಉದ್ದೇಶ, ನಾಲ್ಕನೆಯದು ಬಳಕೆಯಾಗಿರುವ ಭಾಷೆ, ಐದನೆಯದು, ಸ್ತ್ರೀವಾದಿ ಸಾಹಿತ್ಯ ಗಮನಿಸುವಂತೆ ಕೃತಿಯ ವಿಷಯ, ಅದರ ಕ್ರಮ : ಅದರ ಅನುಕ್ರಮ ಹೊಂದಿಕೆ ಇತ್ಯಾದಿ.

ಸ್ವ-ವ್ಯಕ್ತ ಸಾಹಿತ್ಯ ಕೃತಿಗಳಲ್ಲಿ ನೇರವಾಗಿ ವ್ಯಕ್ತವಾಗುವ ಕ್ರಮಗಳು ಬೇರೆ ಬೇರೆ ತೆರನಾಗಿಯೂ ಇರುತ್ತದೆ. ಉದಾಹರಣೆಗೆ, ಸ್ವಾಭಿವ್ಯಕ್ತ ರೀತಿಯನ್ನು ಬಳಸಿಕೊಂಡ ಅಕ್ಕಮಹಾದೇವಿಯ ವಚನಗಳಿಗೂ, ಸಂಚಿಯ ಹೊನ್ನಮ್ಮನ ಕವಿತೆಯ ರೀತಿಗೂ ಅನೇಕ ವ್ಯತ್ಯಾಸಗಳಿವೆ. ಇದು ರೂಪದಲ್ಲಿ, ಸಾಮಾಜಿಕ ಸಂದರ್ಭದಲ್ಲಿ ಕವಿತೆಯನ್ನು ಹೇಳುವ ಕ್ರಮದಲ್ಲಿಯೂ ವ್ಯಕ್ತಗೊಳ್ಳುತ್ತಿರುತ್ತದೆ. ಈ ರೀತಿಯ ಸಂದರ್ಭಗಳು ಬಂದಾಗ ಅಕ್ಕಮಹಾದೇವಿಯನ್ನೋ ಹೊನ್ನಮ್ಮನನ್ನೋ ಆಯ್ಕೆ ಮಾಡಿಕೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ. ಇವೆರಡೂ ರಚನೆಯಾದ ಚರಿತ್ರೆಗಳು ಬೇರೆ ಬೇರೆ ಎಂದು ತಿಳಿದುಕೊಂಡರೆ, ಸಮಸ್ಯೆ ಬಗೆಹರಿಯುತ್ತದೆ.

ಸ್ತ್ರೀವಾದಿ ವಿಮರ್ಶೆಗೂ ಇತರ ವಿಮರ್ಶೆ ಪದ್ಧತಿಗಳಿಗೂ ವ್ಯತ್ಯಾಸ ರೂಪುಗೊಳ್ಳುವುದು ಹೀಗೆ:

೧. ವ್ಯತ್ಯಾಸವೆನ್ನುವುದು ಲಿಂಗ ಪ್ರಭೇದಕ್ಕೆ ಅನುಗುಣವಾಗಿ: ಈ ವ್ಯತ್ಯಾಸ ತಾತ್ಕಲಿಕವಾಗಿದ್ದು ಇದರಲ್ಲಿ ಪುರುಷನೂ ಭಾಗಿಯಾಗಬಹುದು. ವಾಸ್ತವಿಕವಾಗಿ ಒಂದು ಆಲೋಚನಾ ಪಂಥವನ್ನು ಬೆಳೆಸುವುದಕ್ಕೆ ಪೂರಕವಾಗಿ ಇದು ರೂಪಿತವಾಗುತ್ತದೆ.

೨. ಸಾಂಪ್ರದಾಯಿಕ ಫೆಮಿನಿಸ್ಟರು ಗಂಡು-ಹೆಣ್ಣಿನ ಪ್ರಭೇದವನ್ನು ಖಾಯಂ ಆಗಿರುವಂಥದ್ದು ಎಂದು ನಂಬಿದ್ದಾರೆ. ಇದು ಮೇಲು ನೋಟದ ಚರ್ಚೆಯೇ ಆಗಿದೆ. ಇದರಾಚೆಗೂ ಅನೇಕ ಸಂಗತಿಗಳಿವೆ. ಪುರುಷ ಅನ್ನುವುದು ಗಂಡಿಗೆ ಸಂಕೇತವಾಗಿ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ರೂಪಿತವಾಗಿರಬಹುದು. ಪೌರುಷ ಪದದ ಮೂಲವೇ ಪುರುಷನ ಗುಣವನ್ನು ಸೂಚಿಸುತ್ತದೆ. ಈ ಪದವನ್ನು ಪ್ರಜ್ಞಾಪೂರ್ವಕವಾಗಿಯೋ ಅಪ್ರಜ್ಞಾಪೂರ್ವಕವಾಗಿಯೋ ನಾವು ಒಪ್ಪಿಕೊಂಡಿರುತ್ತೇವೆ. ಕನ್ನಡ ಸಾಹಿತ್ಯದಲ್ಲಿ ಅಂತಸ್ಥವಾಗಿರುವ ಕೆಲವು ಅಭಿಪ್ರಾಯಗಳನ್ನು ಗಮನಿಸಬಹುದು.
   - ಪೌರುಷ-ಪುರುಷಃ (ಗೃಹೀತ ಅರ್ಥ - ಶಿಶ್ನ) ಸ್ತ್ರೀತ್ವ (ದುರ್ಬಲ) (ಗೃಹೀತ್ ಅರ್ಥ - ಮೃದು)
   - ಗಂಡು ಪ್ರಬಲ, ಅಧಿಕಾರವುಳ್ಳವನು, ಹೆಣ್ಣು ದುರ್ಬಲ, ಅಧಿಕಾರವಿಲ್ಲದಾಕೆ
   - ಹೆಣ್ಣು ಸ್ವೀಕರಿಸುವುದಕ್ಕೆ ಇರುವವಳು
   - ಹೆಣ್ಣಿಗೆ ಅನೇಕ ಸಮಸ್ಯೆಗಳಿವೆ ಇತ್ಯಾದಿ.
   - ಗಂಡು ಮತ್ತು ಹೆಣ್ಣು ಎನ್ನುವ ಪ್ರಭೇದದ ಮೇಲೆ ಪ್ರವರ್ತಿಸುವ ಋಣಾತ್ಮಕ ಮತ್ತು ಧನಾತ್ಮಕ ಮೌಲ್ಯಗಳು.

   ಉದಾ : ತಿರುಮಲಾಂಬಾ; ಸರಸ್ವತಿ ಗೌಡರ ಬರಹಗಳು.

ಹೆಣ್ಣಿನ ಬಗೆಗೆ ಋಣಾತ್ಮಕವಾಗಿ ನೋಡುವ ಮೌಲ್ಯಗಳು ಜಗತ್ತಿನ ಹೆಚ್ಚಿನ ಸಮಾಜಗಳಲ್ಲಿ ವ್ಯಕ್ತವಾಗಿರುತ್ತದೆ. ಗಂಡು ಧನಾತ್ಮಕವೆಂದೂ, ಹೆಣ್ಣು ಋಣಾತ್ಮಕವೆಂದೂ ಗ್ರಹಿಸುವ ರೀತಿಯು ಸಾಹಿತ್ಯ ಕೃತಿಗಳಲ್ಲಿ ವ್ಯಕ್ತವಾಗುತ್ತಿರುತ್ತದೆ. ಇದರಿಂದ ಗಂಡು ಒಂದು ಉತ್ತಮ ಗುಣವಕ್ಷುಟ್ಟದ ಪ್ರತೀಕವಾಗಿಯೂ ಕಾಣಿಸಿಕೊಳ್ಳಬಹುದು. ಪ್ರಮುಖವಾಗಿ, ಈ ನಮೂನೆಯ ರೀತಿ ಕಾಣಿಸಿಕೊಂಡದ್ದು ಸಾಂಪ್ರದಾಯಿಕ ಫೆಮಿನಿಸ್ಟರಿಗೆ : ಇವರ ಪ್ರಕಾರ, ಗಂಡು ಎಲ್ಲದಕ್ಕೂ ಮಾಡೆಲ್ ಆಗಿಬಿಡುತ್ತಾನೆ. ಗಂಡು ಮಾಡೆಲ್ಲನ್ನು ತಿರಸ್ಕರಿಸಲೆತ್ನಿಸುವ ಸಾಂಪ್ರದಾಯಿಕ ಫೆಮಿನಿಸ್ಟರು ರೂಪಿಸುವ ಸಂಸ್ಕೃತಿಯೂ ಅದೇ ರೀತಿಯಲ್ಲಿರುತ್ತದೆ. ಇವರು ಪ್ರಭೇದಗೊಳಿಸುವ ಬರಹಗಾರ ಬರಹಗಾರ್ತಿಯರು ಎನ್ನುವ ಮಾಡೆಲ್ ಕೂಡಾ ಆರೋಗ್ಯಕರ ಚರ್ಚೆಗೆ ಅವಕಾಶ ಕೂಡಾ ಕಲ್ಪಿಸುವುದಿಲ್ಲ. ಈ ಚರ್ಚೆಯು ಮೇಲುನೋಟದ ಚರ್ಚೆಯೂ ಕೂಡಾ ಆಗಿರುತ್ತದೆ. ಗಂಡು ಮಾಡೆಲ್ ಆದಾಗ, ಗಂಡು ಒಪ್ಪಿಕೊಂಡ ಅನೇಕ ಸಂಗತಿಗಳು ಹೆಣ್ಣಿಗೆ ಸ್ಪರ್ಧಾತ್ಮಕ ಮನೋಭಾವನೆಯನ್ನು ಸೃಷ್ಟಿಸುತ್ತದೆ. ಬರಹಗಾರರ ಭಾಷೆ, ಅವರ ಕೃತಿಯ ರೂಪ, ಅವರು ಬಯಸುವ ಸಾಹಿತ್ಯ ಇತ್ಯಾದಿಗಳನ್ನು ಸ್ತ್ರೀಯರೂ, ಅನುಕರಿಸಬೇಕಾಗುತ್ತದೆ. ಇವು ಸ್ತ್ರೀತ್ವಕ್ಕಿರುವ ಕೆಲವು ವಿಶಿಷ್ಟ ಲಕ್ಷಣಗಳನ್ನು ಅಲ್ಲಗಳೆಯುವಂತೆ ಮಾಡುತ್ತದೆ. ಇದರಿಂದಾಗಿ, ಸಾಂಪ್ರದಾಯಿಕ ಫೆಮಿನಿಸ್ಟರ ಮನೋಭಾವವೇ ಅನಾರೋಗ್ಯಕರ ಲಕ್ಷಣವನ್ನು ಸೂಚಿಸುತ್ತದೆ. ಪ್ರತಿಭಾರ ಕವಿತೆಗಳು; ವಿಣಾಶಾಂತೇಶ್ವರರ ಕತೆಗಳು ಇದಕ್ಕೆ ಉದಾಹರಣೆಗಳಾಗಿವೆ.

ಸಾಂಪ್ರದಾಯಿಕ ಸಾಮಾಜಿಕ ಪರಿಸರವೊಂದರಲ್ಲಿ ಹುಟ್ಟಿದ ಗಂಡು ಅವನದೇ ಆಲೋಚನಾ ಕ್ರಮವನ್ನು ರೂಢಿಸಿಕೊಂಡಿರುತ್ತಾನೆ. ಅವನ ಅನುಭವ ಅವನಿಗೆ ಆ ರೀತಿಯ ಆಲೋಚನಾ ಕ್ರಮವನ್ನು ಕೊಟ್ಟಿರುತ್ತದೆ. ಈತನ ಆಲೋಚನಾ ಕ್ರಮದಲ್ಲಿ ಸಹಜವಾಗಿಯೇ ಗಂಡಸುತನದ ಛಾಪು ಮುದ್ರಿತವಾಗಿರುತ್ತದೆ. ಹೀಗಾಗಿ, ಇದನ್ನೇ ನೇರವಾಗಿ ಕೆಣಕುವ ಸಾಂಪ್ರದಾಯಿಕ ಫೆಮಿನಿಸ್ಟರ ಜಗತ್ತಿನೊಳಗೆ ಗಂಡಸರು ಪ್ರವೇಶಿಸುವಂತಿಲ್ಲ. ಆದರೆ, ಅನಂತರ ಬಂದ ಸ್ತ್ರೀವಾದಿ ವಿಮರ್ಶಕರು ಸಾಂಪ್ರದಾಯಿಕ ಫೆಮಿನಿಸ್ಟರ ಒಟ್ಟು ನಿಲುವುಗಳನ್ನು ಪ್ರಶ್ನಿಸಿದರು. ಸ್ತ್ರೀವಾದಿ ವಿಮರ್ಶೆಯಲ್ಲಿ ಹೊಸ ನಿಲುವುಗಳನ್ನು ತಳೆದ ಇವರು ಗಂಡಸರೂ ಸ್ತ್ರೀವಾದಿ ವಿಮರ್ಶೆಯಲ್ಲಿ ಭಾಗಿಯಾಗ ಬಹುದೆಂದು ಕೇಳಿದ್ದು, ಈ ಕಾರಣಕ್ಕೆ. ಸ್ವಾಭಿವ್ಯಕ್ತಿಕ್ಕೆ (Selfhood) ಗಂಡು ಹೆಣ್ಣು ಸಮಾನವಾಗಿ ಪರಿಗಣಿತವಾಗಬೇಕೆನ್ನುವುದು ಇವರ ಉದ್ದೇಶ. ಪುರುಷಪರ ನಿಲುವನ್ನು ಕೂಡಾ ತೌಲನಿಕವಾಗಿ : ಚಾರಿತ್ರಿಕವಾಗಿ ಗಮನಿಸುವ ಈಚಿನ ಸ್ತ್ರೀವಾದಿ ವಿಮರ್ಶೆ ಮಹತ್ವದ್ದನ್ನು ನಿರೀಕ್ಷೆ ಮಾಡುತ್ತದೆ. ಪುರುಷ ನಿಷ್ಠ ತಾತ್ತ್ವಿಕತೆಯನ್ನು ಪ್ರಶ್ನೆ ಮಾಡಬೇಕೇ ವಿನಃ ಪುರುಷರಿಗೆ ಮುಜುಗರ ಉಂಟು ಮಾಡುವುದು ಫೆಮಿನಿಸ್ಟ್ ವಿಮರ್ಶೆಯ ಧೋರಣೆಯಲ್ಲ. ಸಾಮಾನ್ಯವಾಗಿ ಗಂಡಸರು ಬರೆದ ಕೃತಿಗಳಲ್ಲಿ ರತಿ ಪ್ರತೀಕವೂ ಉಪಮೆ, ರೂಪಗಳ ಮೂಲಕ ಕೆಲಸ ಮಾಡುತ್ತಿರುತ್ತದೆ. ಪುರುಷಾಧಿಪತ್ಯದ ಮುದ್ರೆ

ಇದರಲ್ಲಿರುತ್ತದೆ. ಸ್ತ್ರೀಯರು ಬಳಸುವ ರೂಪಗಳಲ್ಲಿ ಇದನ್ನು ವಿರೋಧಿಸುವ, ಹೊಸ ಸಂಸ್ಕೃತಿಯನ್ನು ರೂಪಿಸುವ ಅಭಿಲಾಷೆ ಕೆಲಸ ಮಾಡುತ್ತದೆ. ಆಧುನಿಕ ಸಾಹಿತ್ಯ ಜಗತ್ತಿನಲ್ಲಿ ಸರ್ವಸಾಮಾನ್ಯವಾದ ಗುಣವಿದು.

ಒಂದು ಸಾಮಾಜಿಕ ಚರಿತ್ರೆಗೆ ಸಂಬಂಧಿಸಿದ ಸ್ತ್ರೀ-ಪುರುಷ ಮನೋಗುಣ ಎಷ್ಟೋ ಸಾರಿ ಮಿಶ್ರವಾಗಿರಬಹುದು ಕೂಡಾ. ಒಂದು ಸಾಮಾಜಿಕ ಚರಿತ್ರೆಯೊಳಗೆ ಸೇರುವ ರಾಜಕೀಯ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಮುಂತಾದ ಸಂಗತಿಗಳು ಮನಸ್ಸುಗಳನ್ನು ನಿಯಂತ್ರಿಸುತ್ತವೆ. ಇದನ್ನೇ ವಿಸ್ತೃತಗೊಳಿಸಿದಲ್ಲಿ ಈ ಸಂಗತಿಗಳ ಮೂಲಕ ಸ್ತ್ರೀವಾದಿ ಕಲೆ; ಸ್ತ್ರೀವಾದಿ ಬೌದ್ಧಿಕತೆ; ಸ್ತ್ರೀವಾದಿ ವಿಮರ್ಶೆ; ಸ್ತ್ರೀವಾದಿ ಅಧ್ಯಯನ ಇತ್ಯಾದಿಗಳು ತಮ್ಮ ಗತಿಗಳನ್ನು ಕಂಡುಕೊಳ್ಳಲು ಅಪಾರ ಸಿದ್ಧತೆಯನ್ನು ನಡೆಸಬೇಕಾಗುತ್ತದೆ ಕೂಡಾ. ಅನುಕ್ರಮವಾಗಿ ಬೆಳವಣಿಗೆಯನ್ನು ಕಂಡ ಪುರುಷ ನಿಷ್ಠ ಚರಿತ್ರೆಯ ಮಗ್ಗುಲಲ್ಲಿ ಹೂತು ಹೋದ ಸ್ತ್ರೀವಾದಿ ಚರಿತ್ರೆಯ ಉತ್ಖನನ ಒಂದು ಅನಿವಾರ್ಯ ಪ್ರತಿಕ್ರಿಯೆ. ಕಪ್ಪು ಸ್ತ್ರೀವಾದಿ ಚಿಂತಕರು ಪ್ರತ್ಯೇಕ ಭಾಷೆ, ಪ್ರತ್ಯೇಕ ಸಂಕೇತ, ಪ್ರತ್ಯೇಕ ಪ್ರತಿಮೆ (Image)ಯನ್ನು ತಮ್ಮ ತಮ್ಮ ಚಾರಿತ್ರಿಕ ಅಭಿವ್ಯಕ್ತಿಗಾಗಿ ಹುಡುಕಲು ತೊಡಗಿದ್ದು ಈ ಕಾರಣದಿಂದ.

ಲಿಖಿತ ಸಾಹಿತ್ಯವನ್ನು ವೈಯಕ್ತಿಕತೆಯ ಪ್ರತೀಕವೆಂದು ಗ್ರಹಿಸುವುದಾದರೆ, ಸಾಮಾನ್ಯವಾಗಿ ಲಿಖಿತ ಸಾಹಿತ್ಯದಲ್ಲಿ ವೈಯಕ್ತಿಕ ಅನುಭವದ ಬಂಧಗಳೇ ರೂಪುಗೊಂಡಿರುತ್ತವೆ. ಹೀಗಾಗಿ ಲಿಖಿತ ಸಾಹಿತ್ಯದಲ್ಲಿ ಪ್ರಾದೇಶಿಕತೆಯ ಬಗೆಗೂ ವೈಯಕ್ತಿಕ ಪ್ರತಿಕ್ರಿಯೆ ಇರುತ್ತದೆ. ಅದು ವ್ಯಕ್ತಗೊಳ್ಳುವ ರೀತಿಯಲ್ಲಿಯೂ ವಿಭಿನ್ನತೆ ಇರುತ್ತದೆ.

ಅನೇಕ ಸೃಜನೇಲ ಕೃತಿಗಳಲ್ಲಿ ಹೆಣ್ಣನ್ನು ಬಹು ಜನ ಗಂಡಸರು ಭೋಗಿಸುವ ಚಿತ್ರಣಗಳು ರೂಪಿತವಾಗಿರುತ್ತವೆ. ಕನ್ನಡ ಸಾಹಿತ್ಯದ ಸಂದರ್ಭದಲ್ಲಿಯೂ ಈ ರೀತಿಯ ಹೇರಳ ಚಿತ್ರಣಗಳು ಕಾಣಸಿಗುತ್ತವೆ. ಶಿವರಾಮ ಕಾರಂತರ 'ಮೈಮನಗಳ ಸುಳಿಯಲ್ಲಿ' ಕಾದಂಬರಿಯಲ್ಲಿ ಲೈಂಗಿಕ ಸಂಬಂಧದ ದಟ್ಟ ಚಿತ್ರಣವನ್ನು ಇಲ್ಲಿ ಒಂದು ಉದಾಹರಣೆಯಾಗಿ ಕೊಡಬಹುದು. ವಾಸ್ತವವಾಗಿ ಇದರ ಮುಖಾಂತರ ಕಾರಂತರು ಚಿತ್ರಿಸುವ ಒಟ್ಟು ವಿವರಗಳು ಪುರುಷ ಮನೋಭಾವದಿಂದಲೇ ಪ್ರೇರಿತವಾಗಿರುವಂಥದ್ದು. ಕೃತಿಯ ಹಿಂದಿನ ಪುರುಷನಿಷ್ಠೆ ಹಂಬಲ ಕೃತಿಯ ಮೇಲೆ ಪ್ರವರ್ತಿಸುತ್ತದೆ. ಗಂಡೊಬ್ಬ ಈ ಕೃತಿಯನ್ನು ಓದಿದರೆ ಅವನು ಈ ಕೃತಿಯನ್ನು ತನ್ನ ಲಿಂಗದ ಆಧಾರದ ಮೇಲೆಯೇ ಸ್ವೀಕರಿಸುತ್ತಾನೆ. ಹೆಣ್ಣಾದರೆ ನಿಲುವನ್ನು ಸ್ವೀಕರಿಸುವ ರೀತಿ ಬೇರೆ.

ಸ್ತ್ರೀವಾದಿ ವಿಮರ್ಶೆಯನ್ನು ರೂಪಿಸುವ ಸನ್ನಿವೇಶಗಳನ್ನು ಕ್ರೋಢೀಕರಿಸಿ ಹೀಗೆ ಹೇಳಬಹುದು.

೧. ಲಿಂಗ ವ್ಯತ್ಯಾಸ, ಜನಾಂಗ; ವರ್ಗ ಮತ್ತು ಅವುಗಳನ್ನು ರೂಪಿಸುವ ಸಾಂಸ್ಕೃತಿಕ ಸನ್ನಿವೇಶ. ಉದಾ: ಸಾರಾ ಬರವಣಿಗೆ.

೨. ಸ್ತ್ರೀಯರ ಖಾಸಗಿ ಚರಿತ್ರೆಗಳು – ವಿಜಯಾದಬ್ಬೆ ಸಂಪಾದಿಸಿದ ಸಾರಸರಸ್ವತಿ.

೩. ಸ್ತ್ರೀವಾದಿ ವಿಮರ್ಶೆಯ ಚರ್ಚೆಗೆ ಬಳಸುವ ತಾಂತ್ರಿಕ ಕುಶಲತೆ – ಸ್ತ್ರೀವಾದಿ ವಿಮರ್ಶೆ.

೪. ಸ್ತ್ರೀ ವಿಮೋಚನೆಯ ಎಚ್ಚರದಿಂದ ಉಂಟಾದ ಇನ್ನಿತರ ಅಂಶಗಳು. ಹೊಸ ಅಭಿರುಚಿ ಮತ್ತು ಹೊಸ ವಿಜ್ಞಾನಕ್ಕೆ ಬೇಕಾದ ಮೂಲಭೂತ ಸಿದ್ಧತೆಗಳಿವು. ಉದಾ: ಕವಿತಾರೈ; ತೇಜಸ್ವಿನಿಯವರ ಬರಹಗಳು.

ಫೆಮಿನಿಸ್ಟ್ ಫಿಲಾಸಫಿಯ ಉಗಮವು ಸ್ತ್ರೀ ಸಮುದಾಯದ ಹಿತಾಸಕ್ತಿಯನ್ನು ಅವಲಂಬಿಸಿ ಬೆಳೆದುದರಿಂದ ಸಹಜವಾಗಿಯೇ ಇದಕ್ಕೆ ವಿಸ್ತೃತವಾದ ಆಯಾಮವೊಂದಿದೆ. ಯಾಕೆಂದರೆ ಪುರುಷ ನಿರ್ಮಿತ ಸಮಾಜ ಬೆಳೆಸಿದ ಅನೇ ಸಂಗತಿಗಳನ್ನು ಇದು ನಿರಾಕರಿಸಬೇಕಾಗುತ್ತದೆ. ಹೀಗಾಗಿ ತನ್ನ ತಾಂತ್ರಿಕ ಸಿದ್ಧತೆಗಾಗಿ ಇದು ವೈಯಕ್ತಿಕ ಸಂಗತಿಗಳನ್ನು ಕೂಡಾ ತನ್ನ ಗಮನಕ್ಕೆ ತಂದುಕೊಳ್ಳುತ್ತದೆ. ಇದರೊಂದಿಗೆ ಸಂಸ್ಕೃತಿ, ಸಂಸ್ಕೃತಿಯೊಂದು ಪ್ರಭಾವಿಸುವ ವೈಯಕ್ತಿಕತೆ, ತಾಂತ್ರಿಕತೆ, ಸ್ವಾಭಿವ್ಯಕ್ತಿಯ ಕ್ರಮ (Self reflexive) ಇತ್ಯಾದಿಗಳನ್ನು ಸ್ತ್ರೀವಾದಿ ಸಿದ್ಧಾಂತವು ಮುಖ್ಯ ತಾತ್ವಿಕತೆಯಾಗಿ ಸ್ವೀಕರಿಸುತ್ತದೆ. ಅನುಭವ, ಅನುಭವಕ್ಕೆ ಕಾರಣವಾಗುವ ಈ ಅಂಶಗಳು, ಸಾಹಿತ್ಯ ವಿಮರ್ಶೆಯಲ್ಲಿಯೂ ಚರ್ಚೆಗೆ ಒಳಪಡುತ್ತದೆ. ಭಾವನೆಗಳು, ಆಲೋಚನೆಗಳು, ಮೌಲ್ಯಗಳು ಇದರೊಂದಿಗೆ ಚರ್ಚೆಗೆ ಅರ್ಹವಾಗುತ್ತದೆ.

ಈ ಮೇಲಿನ ಅನೇಕ ಅಂಶಗಳ ಹಿನ್ನೆಲೆಯಲ್ಲಿ ಸ್ತ್ರೀವಾದಿ ವಿಮರ್ಶೆಯ ರೂಪುರೇಷೆಗಳನ್ನು ಚರ್ಚಿಸಬಹುದು ; ಸ್ತ್ರೀವಾದಿ ವಿಮರ್ಶೆಯ ಮೂಲ ತಿಳುವಳಿಕೆಯು ಸಾಹಿತ್ಯದಲ್ಲಿ ಮತ್ತು ವಿಮರ್ಶೆಯಲ್ಲಿ ಲಿಂಗ ವ್ಯತ್ಯಾಸದ ಬಗೆಗೆ ಯಾವ ನಿಲುವನ್ನು ತಳೆಯಲಾಗಿದೆ ಎನ್ನುವಲ್ಲಿಂದ ಪ್ರಾರಂಭವಾಗುತ್ತದೆ.

ವ್ಯಕ್ತಿಯ ವರ್ತನೆ, ಕರ್ತವ್ಯ, ಅಧಿಕಾರ, ಲೈಂಗಿಕ ಸಂಬಂಧದ ಸ್ವರೂಪ, ಗಂಡು–ಹೆಣ್ಣಿನ ವಿದ್ಯಾಭ್ಯಾಸದ ಅವಕಾಶ, ಗುಲಾಮಿತನ ಸಂತೋಷದ ಗಳಿಗೆಗಳು ಇವೆಲ್ಲವೂ ಸಂಸ್ಕೃತಿಯನ್ನು ಬಿಂಬಿಸುತ್ತದೆ. ಪುರುಷ ನಿಷ್ಠ ಸಂಸ್ಕೃತಿಯಲ್ಲಿ ಇವೆಲ್ಲಾ ಪುರುಷ ಪರವಾಗಿರುತ್ತದೆ. ಸ್ತ್ರೀವಾದಿ ವಿಮರ್ಶೆಯು ಸಂಸ್ಕೃತಿಯಲ್ಲಿ ಗಂಡು–ಹೆಣ್ಣಿನ ಸಂಬಂಧವನ್ನು ಹೇಗೆ ನಿರ್ದೇಶಿಸಲಾಗಿದೆಯೆಂಬ ಮೊದಲನೆಯ ಚರ್ಚೆಯನ್ನು ಎತ್ತುತ್ತದೆ. ಕಲೆಯ ಎಲ್ಲಾ ಪ್ರಕಾರಗಳಲ್ಲಿಯೂ ಸ್ತ್ರೀವಾದಿ ವಿಮರ್ಶೆಯು ಎತ್ತುವ ಮತ್ತೊಂದು ಚರ್ಚೆಯೆಂದರೆ, ಅಭಿವ್ಯಕ್ತಿಯ ಮಾಧ್ಯಮ. ಸ್ತ್ರೀವಾದಿ ಮನಶಾಸ್ತ್ರಜ್ಞರು ಮನೋ ಸ್ವರೂಪ ಮತ್ತು ಅವರ ಬೆಳವಣಿಗೆಯನ್ನು ಲಕ್ಷಿಸಿದರೆ ಸ್ತ್ರೀವಾದಿ ಮಾನವ ಶಾಸ್ತ್ರಜ್ಞರು ಸಂಸ್ಕೃತಿಯ ಅಭ್ಯಾಸದ ಹಿನ್ನೆಲೆಯಲ್ಲಿ ಗ್ರಹಿಸುತ್ತಾರೆ. ಸ್ತ್ರೀವಾದಿ ಭಾಷಾಶಾಸ್ತ್ರಜ್ಞರು ಭಾಷಿಕ ರೂಪ ಮತ್ತು

ಸಂವಹನದ ಸಂದರ್ಭವನ್ನು ಗಣನೆಗೆ ತೆಗೆದುಕೊಂಡರೆ, ಸ್ತ್ರೀವಾದಿ ಚರಿತ್ರೆಕಾರರು ವಿಷಯ, ಅದರ ಅನುಕ್ರಮತೆ ಮತ್ತು ಸಂಶೋಧನೆಯ ಪರಿಕಲ್ಪನೆಯತ್ತ ಯೋಚಿಸುತ್ತಾರೆ.

ಸ್ತ್ರೀವಾದಿ ಚರಿತ್ರೆಯು ಪ್ರಾರಂಭವಾದ ಹಿನ್ನೆಲೆಯು ಆಸಕ್ತಿಯನ್ನು ಕೆರಳಿಸುವಂತಹುದು; ಮೊದಲಿಗೆ ಸ್ತ್ರೀ-ಪುರುಷ ವ್ಯತ್ಯಾಸದ ಕುರಿತಂತೆ ಮಾಹಿತಿಗಳನ್ನು ಸಂಗ್ರಹಿಸಲಾಯಿತು. ಅನಂತರ ಬರಹಗಾರ್ತಿಯರ ಬರಹಗಳನ್ನು ಓದಲಾಯಿತು. ಸ್ತ್ರೀವಾದಿ ಸಂಸ್ಕೃತಿಯ ಕುರಿತು ದಾಖಲಿಸಲಾಯಿತು. ರಾಜಕೀಯ ವ್ಯವಸ್ಥೆಯಲ್ಲಿ ಹೆಣ್ಣಿನ ಸ್ಥಾನಮಾನ, ಸ್ತ್ರೀಯರ ಮಾತುಗಾರಿಕೆಯ ಕ್ರಮ, ಇತ್ಯಾದಿಗಳನ್ನು ಗಮನಿಸಲಾಯಿತು. ಯಾವುದೇ ಒಂದು ಆಲೋಚನಾ ಕ್ರಮದ ಹುಟ್ಟಿಗೆ ಕಾರಣವಾಗುವ ಮಾಹಿತಿಗಳಿವು. ಈ ರೀತಿಯ ಅಧ್ಯಯನದ ಅನಂತರ ಒಂದು ಸಿದ್ಧಾಂತವು ಹುಟ್ಟಲು ಸಾಧ್ಯವಾಗುತ್ತದೆ. ಸ್ತ್ರೀವಾದಿ ವಿಮರ್ಶೆಯಲ್ಲಿಯೂ ಆದುದು ಹೀಗೆಯೇ ಎರಡನೆಯ ಹಂತದ ಸ್ತ್ರೀವಾದಿ ವಿಮರ್ಶೆಯಲ್ಲಿ ಸಾಹಿತ್ಯ ಕೃತಿಗಳಲ್ಲಿ ಸಾಮಾಜಿಕ ಸಂಬಂಧಗಳು, ಆಚರಣೆಗಳು, ಕುಟುಂಬ, ಪುರುಷ ನಿರ್ಮಿಸುವ ಸಂಗತಿಗಳು ಇತ್ಯಾದಿಗಳನ್ನು ಗಮನಿಸಲಾಯಿತು. ಮೂರನೆಯ ಹಂತದಲ್ಲಿ, ತಾತ್ತ್ವಿಕ ಸಂಗತಿಗಳು ಪ್ರಾರಂಭವಾದವು. ಈ ತನಕ ಸಾಧಿತವಾದ ಅನೇಕ ಸಿದ್ಧಾಂತಗಳನ್ನು ತರ್ಕಪೂರ್ಣವಾಗಿ ಈ ಹಂತದಲ್ಲಿ ಚರ್ಚಿಸಲಾಯಿತು.

ಸಾಹಿತ್ಯದ ಯಾವುದೇ ಪ್ರಕಾರವನ್ನು ಕೈಗೆತ್ತಿಕೊಂಡರೂ ಆಯಾ ಪ್ರಕಾರಗಳಲ್ಲಿ ಲಿಂಗ ವ್ಯತ್ಯಾಸವು ಬೇರೆ ಬೇರೆ ರೀತಿಗಳಲ್ಲಿ ಅಭಿವ್ಯಕ್ತಿಯನ್ನು ಪಡೆದುಕೊಂಡಿರುತ್ತದೆ. ಅದರಲ್ಲೂ ಮುಖ್ಯವಾಗಿ ಗಂಡು-ಹೆಣ್ಣಿನ ಸಂಬಂಧದ ಕುರಿತ ವಿವರಗಳೇ ಕಾದಂಬರಿ ಮತ್ತು ಸಣ್ಣ ಕತೆ ಪ್ರಕಾರಗಳಲ್ಲಿ ಹೆಚ್ಚಿನ ಆದ್ಯತೆಯನ್ನು ಪಡೆದಿರುತ್ತದೆ. ಸಾಂಸ್ಥಿಕ ಅಂಗವಾದ ಕುಟುಂಬದ ಮೂಲ ಘಟಕಗಳಾದ ಗಂಡು-ಹೆಣ್ಣಿನ ಸಂಬಂಧದ ನಿರೂಪಣೆಯೇ ಕನ್ನಡದ ಬಹುತೇಕ ಕಾದಂಬರಿ, ಕವಿತೆ, ಸಣ್ಣ ಕತೆಗಳಲ್ಲಿ ಕಾಣಿಸಿಕೊಳ್ಳುತ್ತದೆ. ಇದು ಕೇವಲ ಸಾಪೇಕ್ಷವಾದುದಲ್ಲ. ಈ ಸಂಬಂಧಗಳ ನಿರ್ವಹಣೆಯ ಹಿನ್ನೆಲೆಯಲ್ಲಿ ಭಾರತೀಯ ಸಮಾಜ ಪದ್ಧತಿಯ ಸ್ಪಷ್ಟ ಛಾಪು ಇದೆ. ಈ ಸಂಬಂಧಗಳ ನಿರ್ವಹಣೆಯು ಕೃತಿಯ ವಿನ್ಯಾಸದೊಳಗೆ ಅನುಷಂಗಿಕವಾಗಿ ಬಂದಿರಬಹುದು. ಇಲ್ಲವೇ ಸಾವಯವ ಸಂಬಂಧ ಪಡೆದಿರಬಹುದು. ಮೇಲು ನೋಟಕ್ಕೆ ಲೈಂಗಿಕ ಸಂಬಂಧದ ನಿರ್ವಹಣೆಯ ಕ್ರಮದ ಚರ್ಚೆಯು ಮಹತ್ವದ್ದನ್ನು ಹೇಳುವುದಿಲ್ಲ. ಸಾಮಾಜಿಕ ನಡವಳಿಕೆಯಲ್ಲಿ ರೂಪುಗೊಳ್ಳುವ ವ್ಯಕ್ತಿಯೊಬ್ಬನ ದೈನಂದಿನ ಬದುಕಿನ ವಿಕಾಸ ಕ್ರಮವಾಗಿ, ಆದರ್ಶದ ಅಕ್ಷರವಾಗಿ ಮಾರ್ಪಾಡು ಹೊಂದುವ ಸೃಜನಶೀಲ ಕಲೆಯಲ್ಲಿ ಲೈಂಗಿಕ ಸಂಬಂಧದ ನಿರೂಪಣೆಯ ಕ್ರಮವೂ ಕೂಡಾ ಪಕ್ಷಿನೋಟಕ್ಕೆ ದಕ್ಕುವಂತಹದ್ದಲ್ಲ. ಯಾವುದೇ ಸಾಮಾಜಿಕ, ಚಾರಿತ್ರಿಕ ಸಂಬಂಧದಲ್ಲಿ ಬರೆಯುವ ಕೃತಿಕಾರ ತನ್ನ ಚರಿತ್ರೆಯು ಒತ್ತಾಯಿಸುವ ಆಸೆಗಳನ್ನು ಹಿಡಿಯುತ್ತಾನೆ. ಹೀಗೆ ಹಿಡಿಯುವ ಆಸೆಯ ದಿವ್ಯ ಕ್ಷಣಗಳು ಕೃತಿಯಲ್ಲಿ ಪಡೆಯುವ ಆಕಾರಕ್ಕೆ ತಕ್ಕ ಉತ್ಖನನ ನಡೆಯಬೇಕಾಗುತ್ತದೆಯೆಂದು ಫೆಮಿನಿಸ್ಟ್ ವಿಮರ್ಶೆ

ನಂಬುತ್ತದೆ. ಪುರುಷಾಧಿಪತ್ಯ ಸ್ಥಾನಮಾನದ ಅವನತಿಯೂ ಇದರಿಂದ ಸಾಧ್ಯವಾಗಬಹುದು ಎಂದು ಒರಟು ಫೆಮಿನಿಸ್ಟರ ನಂಬಿಕೆ. ಆದರೆ, ಒಂದು ವಿಷಯ ಮಾತ್ರ ಸ್ಪಷ್ಟ ; ಪುರುಷ ನಿರ್ಮಿತ ಪ್ರಪಂಚದಾಚೆಗಿನ ಕನಸನ್ನು ತುಂಬಿದ ಫೆಮಿನಿಸ್ಟ್ ವಿಮರ್ಶೆ ಅಧಿಕಾರದ ವಿಕೇಂದ್ರಿಕತೆಯನ್ನು ಹೊಸ ಸ್ಥಾನಮಾನವನ್ನು ಬಯಸುತ್ತದೆ.

ಬೆಲ್‌ಹುಕ್ಸ್ ಕಪ್ಪು ಸ್ತ್ರೀವಾದಿಗಳ ಕುರಿತಂತೆ ಚರ್ಚಿಸುವಾಗ ಒಂದು ಮಾತು ಹೇಳುತ್ತಾಳೆ : "ಕಪ್ಪು ಮಹಿಳೆಯ ಅನುಭವ ಮತ್ತು ಅವಳ ಸಮಾಜದ ಸಂಬಂಧದ ಕುರಿತು ಹೇಳುವಾಗ ಜನಾಂಗ ರಾಜಕಾರಣವನ್ನು ಲಕ್ಷಿಸಬೇಕು". ಕಪ್ಪು ಮಹಿಳಾ ಚಿಂತನೆಯ ಹಿನ್ನೆಲೆಯೇ ಗುಲಾಮತನದಲ್ಲಿದ್ದ ಕಪ್ಪು ಸ್ತ್ರೀ ವಿಮೋಚನಾವಾದಿ ಚಳುವಳಿ ಇತ್ಯಾದಿಗಳು ಕೆಲಸ ಮಾಡುತ್ತವೆ.

ಮಾರ್ಕ್ಸ್‌ವಾದಿ ವಿಮರ್ಶಕರಿಗೂ, ಸ್ತ್ರೀವಾದಿ ವಿಮರ್ಶಕರಿಗೂ ಒಪ್ಪಂದ ಸಾಧ್ಯವಾಗಿದ್ದರೂ ಅನಂತರದಲ್ಲಿ ವ್ಯತ್ಯಾಸ ಕಂಡುಬಂತು. ಮಾರ್ಕ್ಸ್ ವಾದಿಗಳು ಸ್ತ್ರೀಯರನ್ನು ಗುಲಾಮ ವರ್ಗದಲ್ಲಿ ಸೇರಿಸುತ್ತಾರೆ ನಿಜ. ಫೆಮಿನಿಸ್ಟರು ಹೇಳುವಂತೆ ಕ್ಯಾಪಿಟಲಿಸಂನ ವಿರುದ್ಧ ವಿಸ್ತೃತವಾದ ಅರ್ಥದಲ್ಲಿ ನಾವು ಜಗಳಮಾಡುತ್ತೇವೆ. ಮಾರ್ಕ್ಸ್‌ವಾದದೊಂದಿಗಿನ ಮದುವೆ ಕೇವಲ ಒಪ್ಪಂದವಾಗಿತ್ತಷ್ಟೆ. ಈ ಮದುವೆಯಿಂದ ಉಂಟಾದ ಸಂಬಂಧ ಆರೋಗ್ಯಕರವಾಗಿರಬೇಕು ಇಲ್ಲವೇ ನಮಗೆ ಈ ಮದುವೆಯಿಂದ ವಿಚ್ಛೇದನ ದೊರೆಯಬೇಕೆಂದು ಫೆಮಿನಿಸ್ಟರ ವಾದ. ತಾಯ್ತನವನ್ನು ಸಾಮಾಜಿ ಚರಿತ್ರೆಯ ಅನಿವಾರ್ಯತೆಯೆಂದು ಭಾವಿಸುವ ಮಾರ್ಕ್ಸ್‌ವಾದವು ಮಹಿಳೆಯನ್ನು ಲೇಬರ್ ಕ್ಲಾಸ್‌ಗೆ ಸೇರಿಸುತ್ತದೆ. ಇದರೊಂದಿಗೆ ಕೆಲವು ಫೆಮಿನಿಸ್ಟರಿಗೆ ಸಹಮತವಿಲ್ಲ. ಹೈಡಿಹಾರ್ಟಮನ್ ಎಂಬಾಕೆಯ ಸಿಟ್ಟು ಈ ಬಗೆಯದು. ಆದುದರಿಂದಲೇ ಆಕೆ 'ಮಾರ್ಕ್ಸ್‌ವಾದದೊಂದಿಗೆ ಫೆಮಿನಿಸ್ಟರ ಅತೃಪ್ತಿಯ ಮದುವೆ' ಎಂದು ಕರೆಯುತ್ತಾಳೆ. ದುಡಿಯುವ ವರ್ಗದ ಮಹಿಳೆಯರಿಂದ ಸೃಷ್ಟಿಯಾದ ಜಾನಪದ ಕತೆಗಳು ; ಕಾವ್ಯ ಒಗಟು ಇತ್ಯಾದಿಗಳ ಅಧ್ಯಯನಕ್ಕೆ ಕೆಲವು ವೈಶಿಷ್ಟ್ಯಗಳು ಇದೆಯಾದರೂ, ಇವುಗಳನ್ನು ಕೇವಲ ದುಡಿಯುವ ವರ್ಗದ ಸೃಷ್ಟಿಯೆಂದು ಕರೆಯುವಂತಿಲ್ಲ. ಲಿಂಗ ವ್ಯತ್ಯಾಸದ ಪ್ರಬಲ ಮುದ್ರೆ ಇಲ್ಲಿಯೂ ಕಾಣಿಸಿಕೊಳ್ಳುತ್ತದೆ. ರಾಜಕೀಯ, ಆರ್ಥಿಕ ವ್ಯವಹಾರಗಳ ಹಿನ್ನೆಲೆಯನ್ನು ಮಾನದಂಡ ವಾಗಿಟ್ಟುಕೊಂಡ ಮಾರ್ಕ್ಸ್‌ವಾದದೊಂದಿಗೆ ಸಹಮತವಿಲ್ಲವೆಂದು ವಾದಿಸುವ ಫೆಮಿನಿಸ್ಟರು ರಾಜಕೀಯ ಮತ್ತು ಆರ್ಥಿಕ ವ್ಯವಹಾರಗಳು ಕೇವಲ ಬಂಡವಾಳಶಾಹಿಯ ಪ್ರತೀಕವಲ್ಲ ಎಂದು ತಿಳಿಯುತ್ತಾರೆ. ತಾಯ್ತನವನ್ನೇ ನಿರಾಕರಿಸುವ ಕೆಲವು ಫೆಮಿನಿಸ್ಟರು ಈ ಬಗೆಗೆ ಉಗ್ರ ನಿಲುವನ್ನು ತಳೆಯುತ್ತಾರೆ. ಸ್ತ್ರೀಯರು ಬಯಸುವ ಸ್ಥಾನಮಾನಕ್ಕೆ ಧಕ್ಕೆ ತರುವ ಯಾವ ವಿಚಾರಗಳನ್ನೂ ಅಷ್ಟಾಗಿ ಸಹಿಸದ ಫೆಮಿನಿಸ್ಟರ ತಾತ್ತ್ವಿಕ ಭಿತ್ತಿ ಒಂದು ದೃಷ್ಟಿಯಿಂದ ಹೊಸ ಆಲೋಚನಾ ಕ್ರಮದ ಗಂಭೀರ ಪ್ರಯತ್ನವೂ ಹೌದು. ಹೊಸ ಸಂಸ್ಕೃತಿಯ ಚಿಗುರಾದ ಇದು ಇತರ ಪ್ರಯತ್ನಗಳಿಂದ ಬೇರೆಯಾಗಲು ಹವಣೆ ಕೂಡಾ.

ಮಾರ್ಕ್ಸ್‌ವಾದದಂತೆ ಫೆಮಿನಿಸ್ಟ್ ಸಿದ್ಧಾಂತಕ್ಕೂ ನಿರ್ಧಿಷ್ಟ ರಾಜಕೀಯ ಉದ್ದೇಶವಿದೆ. ಇದನ್ನೇ ವಿಸ್ತೃತವಾಗಿ ಹೇಳಬೇಕೆಂದರೆ, ಲೈಂಗಿಕ ಕಾರಣವೆಂದೂ ಕರೆಯಬಹುದಾಗಿದೆ. ವಾಸ್ತವವಾಗಿ ಎಲ್ಲಾ ಜನಾಂಗಗಳಲ್ಲಿಯೂ ಎರಡನೇ ದರ್ಜೆಯ ಪ್ರಜೆಯಾದ ಹೆಣ್ಣೆ ಅನೇಕ ಸವಲತ್ತುಗಳಿಂದ ವಂಚಿತಳಾಗಿದ್ದುದಕ್ಕೆ ಮುಖ್ಯ ಕಾರಣ ಲೈಂಗಿಕ ರಾಜಕಾರಣ. ಬಂಡವಾಳಶಾಹಿ ಜಗತ್ತಿನಲ್ಲಿ ಹೆಣ್ಣಿನ ಬಳಕೆಯೂ ಈ ರೀತಿಯ ರಾಜಕಾರಣದ ಪ್ರವೃತ್ತ ಸ್ಥಿತಿಯಿಂದ ಉಂಟಾಗಿದ್ದು, ಈ ರಾಜಕಾರಣದ ವಿರುದ್ಧ ಪ್ರವೇಶಿಸುವುದಕ್ಕೆ ಲಿಂಗ ವಿಭಜನೆಯೇ ಮುಖ್ಯ ಮಾನದಂಡವಾಗಿರುತ್ತದೆ. ಈ ಕೆಳಗಿನ ಕೆಲವು ಸಂಗತಿಗಳು ಲೈಂಗಿಕ ರಾಜಕಾರಣಕ್ಕೂ ಮುಖ್ಯ ಕಾರಣಗಳಾಗಿವೆ.

೧. ಸಾಂಪ್ರದಾಯಿಕ ದೃಷ್ಟಿಕೋನದಲ್ಲಿ ಹೆಣ್ಣಿಗೆ ದುರ್ಬಲತೆಯ ವಿಶೇಷಣವನ್ನು ಹಚ್ಚಿ ಆಕೆಗೆ ಕೆಲವು ರೀತಿಯ ದುಡಿಮೆಯನ್ನು ಮಾತ್ರ ಕೊಟ್ಟಿರುವುದು. ಈ ರೀತಿಯ ಮನೋಭಾವ ಎಷ್ಟರ ಮಟ್ಟಿಗೆ ಕೆಲಸ ಮಾಡುತ್ತದೆಯೆಂದರೆ, ದುಡಿಯುವ ರೀತಿಯೇ ಆಕೆಯ ಒಟ್ಟು ಮನೋಭಾವವನ್ನು ನಿಯಂತ್ರಿಸುತ್ತದೆ. ಆಧುನಿಕ ಬಂಡವಾಳಶಾಹಿ ನಾಗರೀಕತೆಯಲ್ಲಿ ನವಿಲಾಗಬೇಕಾದ ಅನಿವಾರ್ಯ ಸಹಜವಾಗಿಯೇ ಸಂಜನಿತವಾಗುತ್ತದೆ. ರಿಸೆಪ್ಷನಿಸ್ಟ್, ದಾದಿ, ಸ್ಟೆನೋ ಇತ್ಯಾದಿ ಕೆಲಸಗಳಿಗೆ ವಿನಿಯೋಗವಾಗುವ ಹೆಣ್ಣಿನ ಬಳಕೆಯೂ ಲೈಂಗಿಕ ರಾಜಕಾರಣದ ಪ್ರತಿನಿಧಿಯಾಗಿದೆ.

೨. ಪುರುಷಾಧಿಪತ್ಯ ಮೊದಲ ಪ್ರಯತ್ನ ಕೌಟುಂಬಿಕ ಉಗಮದೊಂದಿಗೆ ಪ್ರಾರಂಭವಾಯಿತೆಂದು ಮಾರ್ಕ್ಸ್‌ವಾದಿಗಳು ನಂಬುತ್ತಾರೆ. ಸಾಮಾಜಿಕ ಸಂಸ್ಥೆಯಾದ ಕುಟುಂಬದ ಚಿರಸ್ವರೂಪದ ಬದಲಾವಣೆಯೇ ಒಟ್ಟೂ ಸಾಮಾಜಿಕ ಸಂಚಲನೆಗೆ ಕಾರಣವಾಗಬಹುದಾದರೂ, ಹೆಣ್ಣಿನ ತಾಯ್ತನ ಹೆಣ್ಣನ್ನು ಕುಟುಂಬದ ಸ್ವರೂಪದಲ್ಲಿ ಬಂಧಿಸಿದೆ. ಇದರಿಂದಾಗಿಯೇ ಪಿತೃರೂಪ ಸಂಸ್ಕೃತಿಯೊಂದು ಚರಿತ್ರೆಯ ಎಲ್ಲಾ ಘಟ್ಟಗಳಲ್ಲಿಯೂ ಮೂಡಿ ಬಂದಿದೆ.

೩. ಸಂಭೋಗದ ಕಾಲದಲ್ಲಿ ಹೆಣ್ಣಿನ ಮನೋಸ್ಥಿತಿಯೂ ಕೂಡಾ ನಿಧಾನವಾಗಿರುವಂಥದ್ದು ಎನ್ನುವ ನಂಬಿಕೆಯನ್ನು ಭಾರತೀಯ ಸಂಸ್ಕೃತಿಯು ಹುಟ್ಟು ಹಾಕಿದೆ. ಯೋನಿಯ ಪಾವಿತ್ರ್ಯದ ಬಗೆಗೆ ಹೆಚ್ಚಿನ ಸಮಾಜಗಳಲ್ಲಿ ಇರುವ ನಿಲುವನ್ನು ರೆಸೆಲ್ ಖಂಡಿಸುವಾಗ ಸ್ತ್ರೀಪರವಾದ ನಿಲುವನ್ನು ತಳೆಯುತ್ತಾನೆ ನಿಜ. ವಾಸ್ತವವಾಗಿ ರೆಸೆಲ್‌ನ ವಿಚಾರವೂ ಒಂದು ಚರಿತ್ರೆಯ ಒಳಸಿಗಿತಕ್ಕೆ ಸಿಕ್ಕಿರುವಂಥದ್ದು. ಲೈಂಗಿಕ ರಾಜಕಾರಣದ ಮೂರು ದಿಕ್ಕುಗಳಿವು : ದುಡಿಮೆಯ ಲೋಕದಲ್ಲಿ, ಕೌಟುಂಬಿಕ ನಿಯತ್ತಿನಲ್ಲಿ, ಸಂಭೋಗದ ಕಾಲದಲ್ಲಿ ಹೆಣ್ಣನ್ನು ಜಿಸ್ವೀಕೃತಿಜಿ ಅನ್ನುವ ಅರ್ಥದೊಂದಿಗೆ ಎಲ್ಲಾ ಸಮಾಜದಲ್ಲಿ ಗ್ರಹಿಸಲಾಯಿತು. ಸ್ವೀಕರಿಸುವುದಕ್ಕೆ ಯಾವ ಸಮಾಜದಲ್ಲಿಯೂ ಅಷ್ಟಾಗಿ ಪ್ರಾಶಸ್ತ್ಯವಿಲ್ಲದ ಕಾಲಘಟ್ಟ ಸಂದುಹೋಗಿದೆ. ಸ್ವೀಕರಿಸುವುದಕ್ಕೆ ಎಲ್ಲಾ

ಅರ್ಥದಲ್ಲಿ ಮಹತ್ವ ಸಂಪ್ರಾಪ್ತವಾಗಿದೆ. ಸ್ವೀಕರಿಸುವ ಅರ್ಥದ ಓದುಗ ಪ್ರೇಕ್ಷಕ : ಕೇಳುಗ : ನೋಡುಗ; ಹೆಣ್ಣು : ಸಭಿಕ ಇತ್ಯಾದಿಗಳ ಮೂಲಕವೇ ಎಲ್ಲವನ್ನು ಚರ್ಚಿಸುವ ಹಂತವನ್ನು ತಲುಪಿದ್ದೇವೆ.

ಲೈಂಗಿಕ ರಾಜಕಾರಣವನ್ನು ಅದೇ ರೀತಿಯಲ್ಲಿ ಎದುರಿಸುವ ಸ್ತ್ರೀವಾದಿ ವಿಮರ್ಶೆಯಲ್ಲಿ ಭಾಷೆಯ ಬಗೆಗಿನ ನಿಲುವು ಒಂದು ಈಗಾಗಲೇ ಹೇಳಿರುವ ಮೂರು ದಿಕ್ಕುಗಳಲ್ಲಿ ನೇರವಾಗಿ ಅಥವಾ ಪರೋಕ್ಷವಾಗಿ ಪ್ರಭಾವವನ್ನು ಬೀರುತ್ತದೆ.

ಭಾಷೆಯಲ್ಲಿ ಸೃಷ್ಟಿಯಾಗುವ ಸಂವಹನದ ಕ್ರಿಯೆಯೂ ಅನುಭವ ಮತ್ತು ಅಭಿವ್ಯಕ್ತಿಯ ಸಂಬಂಧದಿಂದಲೇ ಸಾಧ್ಯವಾಗುವಂತಹುದು. ಭೌತಿಕವಾದ ಫೆಮಿನಿಸ್ಟ್ ವಿಮರ್ಶೆಯು ಭಾಷೆಯನ್ನು ರಾಜಕೀಯ ಚಟುವಟಿಕೆಯಾಗಿ ಗ್ರಹಿಸುವುದು ಇದೇ ಕಾರಣಕ್ಕೆ. ಹೆಣ್ಣಿನ ಆಲೋಚನಾ ಕ್ರಮದ ಪ್ರಭಾವ ಬೀರುವ ಕುಟುಂಬ, ಸಮಾಜ, ಧರ್ಮ ಇತ್ಯಾದಿಗಳು ಹೆಣ್ಣಿನ ಭಾಷೆಯ ಮೇಲೆ ಪ್ರಭಾವ ಬೀರುತ್ತದೆ. ಆಲೋಚನಾ ಕ್ರಮವನ್ನು ರೂಪಿಸುವ ಈ ಅಂಶಗಳು ಅನುಭವಕ್ಕೂ ಕೂಡಾ ಕಾರಣವಾಗುವಂಥವು. ನಮಗೆ ನಮ್ಮ ನಮ್ಮ ಭಾಷೆಯ ಆಕೃತಿಯಂತೆ, ನಮ್ಮ ಸಂಸ್ಕೃತಿಕ ಪರಂಪರೆಗಳಿಂದ ರೂಪುಗೊಂಡ ಭಾಷೆಯ ಚೌಕಟ್ಟಿನೊಳಗೇ ನಮ್ಮ ದೃಷ್ಟಿ, ನಮ್ಮ ಬಣ್ಣ ಕಾರ್ಯ ಮಾಡುತ್ತದೆ. ಆದರೆ ಈ ರೂಪುಗೊಳ್ಳುವ ಕೆಲಸ ಸದಾ ನಡೆದೇ ಇರುತ್ತದೆ. ಸುತ್ತಲಿನ ಜಗತ್ತು ಹಾಗೂ ಮಾನವ ಇದರ ನಡುವಿನ ಕ್ರಿಯೆ, ಪ್ರತಿಕ್ರಿಯೆಗಳು ಸದಾ ನಡೆದೇ ಇರುತ್ತದೆ. ಅದರ ನಡುವಿನ ಸಂಬಂಧ ಸದೈವ ಬೆಳೆಯುತ್ತಲೇ ಇರುತ್ತದೆ. ಇದೇ ಜೀವನ. ಈ ಕ್ರಿಯೆಯಲ್ಲಿ ಭಾಷೆ ಸದೈವ ಕಾರ್ಯ ಮಾಡುತ್ತಿರುತ್ತವೆ (ಶಾಂತಿನಾಥ ದೇಸಾಯಿ, ೧೯೮೦, ಪು. ೪೯). ಹಾಗಾಗಿಯೇ ಪುರುಷನಿಷ್ಠ ಸಂಸ್ಕೃತಿಯ ಹಿನ್ನೆಲೆಯಲ್ಲಿ ರೂಪಿತವಾದ ಭಾಷೆ ಅದಕ್ಕೆ ಪೂರಕವಾಗಿರುತ್ತದೆ. ಮಾತು ಮತ್ತು ಬರಹ ಎರಡೂ ಕೂಡಾ ಪುರುಷನಿಷ್ಠ ಸಂಸ್ಕೃತಿಯಲ್ಲಿ ಪುರುಷನ ಮನೋಭಾವಕ್ಕೆ ಪೂರಕವಾಗಿರುತ್ತದೆ.

ಸ್ತ್ರೀ ಭಾಷೆಯೂ ಎರಡು ಅಡಿಗಟ್ಟುಗಳಲ್ಲಿ ನಿರ್ಮಾಣ ಹೊಂದುತ್ತವೆ.

೧. ವೈಯಕ್ತಿಕ ಅನುಭವದ ಹಿನ್ನೆಲೆಯಲ್ಲಿ ರೂಪಿತವಾಗಿರುವ ಭಾಷಿಕ ಸಂಗತಿಗಳು.

೨. ಬೌದ್ಧಿಕ ವಲಯದ ಹಿನ್ನೆಲೆಯಲ್ಲಿ ರೂಪಿತವಾಗಿರುವ ಭಾಷಿಕ ಸಂಗತಿಗಳು.

ಈ ಪ್ರಭೇದವನ್ನು ಇನ್ನೊಂದು ರೀತಿಯಲ್ಲಿಯೂ ಸಂಯೋಜಿಸಬಹುದು.

ಅ. ಹುಟ್ಟಿನಿಂದಲೇ ಕಲಿತುಕೊಂಡಿರುವ ಸಹಜ ಭಾಷೆ.

ಇ. ಬೆಳೆದಂತೆಯೆ ಗ್ರಹಿಸಿಕೊಂಡಿರುವ ಭಾಷೆ, ಇದು ಲಿಖಿತ ಮಾಧ್ಯಮ ಅಥವಾ ಹಾಡುವ, ಕತೆ ಹೇಳುವ ಮಾಧ್ಯಮದಲ್ಲಿ ಕಾಣಿಸಿಕೊಳ್ಳುತ್ತದೆ.

ವೈಯಕ್ತಿಕ ಅನುಭವದ ಹಿನ್ನೆಲೆಯಲ್ಲಿ ಸ್ತ್ರೀಯು ಬಳಸುವ ಭಾಷೆಯನ್ನು ಒಂದು

ತಾಂತ್ರಿಕ ಭಾಷೆಯೆಂದು ಕರೆಯಬಹುದಾಗಿದೆ. ಈ ಭಾಷಿಕ ಕ್ರಮ ಮುಖ್ಯವಾಗಿ ಕುಟುಂಬದ ಹಿನ್ನೆಲೆಯಲ್ಲಿ ತನ್ನ ಅವಸ್ಥಾಂತರಗಳನ್ನು ಕಂಡುಕೊಳ್ಳುತ್ತದೆ. ಉದಾಹರಣೆಗೆ ದುಡಿಯುವ ವರ್ಗದ ಮನೆಯ ಪರಿಸರದಲ್ಲಿ ಬಂದ ಹೆಣ್ಣು ತನ್ನ ಮಾತುಗಳಿಗೆ ಪೂರಕವಾಗಿ ದುಡಿಯುವ ಪರಿಭಾಷೆಯನ್ನೆ ಬಳಸುತ್ತಾಳೆ. ಅಸಂಸ್ಕೃತ ಅನ್ನಬಹುದಾದ ಅನೇಕ ಮಾತುಗಳು ಆಕೆಯಲ್ಲಿ ತೀರಾ ಸಹಜವಾಗಿ ಬರುತ್ತವೆ.

ಇನ್ನೊಂದು ಬೌದ್ಧಿಕ ಗ್ರಹಿಕೆಯಿಂದ ಸ್ತ್ರೀಗೆ ಹುಟ್ಟಿಕೊಳ್ಳುವ ಭಾಷೆ. ಅಕ್ಷರಾಭ್ಯಾಸಪಡೆದು, ಹೊಸ ಯುಗದ ಚಿಂತನೆಗೆ ತೆರೆದುಕೊಂಡು ಬಳಸುವ ಮುಖ್ಯವಾಗಿ ನಿಯಮಬದ್ಧ ತರ್ಕದ ಹಿನ್ನೆಲೆಯಲ್ಲಿ ತನ್ನ ಆಸರೆಯನ್ನು ಪಡೆದುಕೊಳ್ಳುತ್ತದೆ.

ಫೆಮಿನಿಸ್ಟರು ಭಾಷೆಯನ್ನು ಪಾರದರ್ಶಕ ಗುಣವುಳ್ಳದ್ದೆಂದೇ ತಿಳಿದುಕೊಳ್ಳುತ್ತಾರೆ. ಇದರಿಂದಾಗಿ ಯಾವುದೇ ಕವಿತೆಯ, ಕತೆಯ, ಕಾದಂಬರಿ, ನಾಟಕದ ಭಾಷೆಯನ್ನು ಪಠ್ಯದೊಳಗೆ ಇವರು ಅಂಟಿಸುವುದಿಲ್ಲ. ಭಾಷೆಯು ಪಾರದರ್ಶಕದ ಗುಣವುಳ್ಳದ್ದೆಂದು ಒಪ್ಪಿಕೊಂಡಂತೆ ಆಯಾಚಿತವಾಗಿ ಇದಕ್ಕೆ ಮಹತ್ವದ ಸಾಧ್ಯತೆಯು ಒದಗಿ ಬರುತ್ತದೆ. ಪಠ್ಯವನ್ನು ವಿಕೇಂದ್ರೀಕರಿಸಲು ಸಾಧ್ಯವಾಗಬಹುದಾದ ತಾತ್ವಿಕತೆಗಳಲ್ಲಿ ಇದೂ ಒಂದು.

ಉಪಮೆ, ರೂಪಕ ಇತ್ಯಾದಿಗಳನ್ನು ಒಳಗೊಂಡ ಭಾಷೆಯು ಸ್ತ್ರೀವಾದಿಗಳಿಗೆ ಆಸಕ್ತಿಯಿದೆ. ಸ್ತ್ರೀವಾದಿಗಳ ಐಡೆಂಟಿಟಿ ಇದರ ಮೂಲಕ ಸಾಧ್ಯವಾಗುತ್ತದೆಯೆಂಬ ನಿಲುವು ಅವರದು. ಇನ್ನಿತರ ಸಂಗತಿಗಳನ್ನು ಕ್ರೋಢೀಕರಿಸಿ ಹೀಗೆ ಹೇಳಬಹುದು:

೧. ಓದುಗರಿಗೆ ಸಂವಾದ ಏರ್ಪಡಿಸುವಂತಹ ಭಾಷೆಯ ಬಳಕೆ.

೨. ಭಾಷೆಯ ಸಂವಹನ.

೩. ಭಾಷೆಯ ಲಯಬದ್ಧತೆಯನ್ನು ಸ್ತ್ರೀ ವ್ಯಕ್ತಿತ್ವಕ್ಕೆ ಅನುಗುಣವಾಗಿ ರೂಪಿಸುವುದು.

೪. ಭಾಷೆಯ ಮೂಲಕ ಹೇಳುವ ಅನುಭವ.

೫. ಪ್ರತಿಮಾತ್ಮಕವಾಗಿ ಹೇಳುವುದಕ್ಕಿಂತ ಸರಳತೆಯು ಹೆಚ್ಚು ಮುಖ್ಯ.

೬. ಮೂಲತಃ ಪ್ರಕೃತಿಯ ಸಿದ್ಧತೆಯೆಲ್ಲವೂ ಬೇರೆ ಬೇರೆ ಮಾಧ್ಯಮದ ಮೂಲಕ ವ್ಯಕ್ತವಾಗುವುದು. ಈ ದೃಷ್ಟಿಯಿಂದ ಇನ್ನೂ ಹೆಚ್ಚಿನ ಅಧ್ಯಯನದ ಅಗತ್ಯವಿದೆ.

ಸ್ತ್ರೀವಾದಿ ಚಿಂತನಾ ಕ್ರಮವು ಇಲ್ಲಿಂದಲೇ ಪ್ರಾರಂಭವಾಗುತ್ತದೆ.

ಸ್ತ್ರೀವಾದಿ ವಿಮರ್ಶೆಯಲ್ಲಿ ಪುರುಷನೂ ಭಾಗಿಯಾಗಬಹುದೇ? ಎನ್ನುವುದು ಮೊದಲ ತಾರ್ಕಿಕ ಪ್ರಶ್ನೆ. ವಿಮರ್ಶೆಯಲ್ಲಿ ಗಂಡನ್ನೂ ಸಮಾನವಾಗಿ ಪರಿಗಣಿಸುತ್ತಾರೆ. ಆಂಗ್ಲೋ ಅಮೇರಿಕಾದ ಸ್ತ್ರೀವಾದಿ ವಿಮರ್ಶೆಯ ಹುಟ್ಟು ಸ್ತ್ರೀ ವಿಮೋಚನಾವಾದಿಗಳಿಂದಲೇ ಆಯಿತಾದರೂ ಅನಂತರದಲ್ಲಿ ಈ ವಿಮರ್ಶಾ ಪಂಥಕ್ಕೆ ಪ್ರೋತ್ಸಾಹವನ್ನು ಕೊಟ್ಟವರು ಪುರುಷರೆ. ರೊವೆನಾ ಸ್ತ್ರೀವಾದಿ ವಿಮರ್ಶೆಯಲ್ಲಿ ಪುರುಷ ಭಾಗಿಯಾಗುವುದನ್ನು ಒತ್ತಿ

ಹೇಳುತ್ತಾಳೆ. ಫೆಮಿನಿಸ್ಟ್ ವಿಮರ್ಶೆಯ ಮುಂದುವರಿಕೆಗೆ ಪುರುಷರೂ ಭಾಗಿಯಾಗಬೇಕೆಂದು ಆಕೆಯ ಅಭಿಮತ. ಆಕೆಯ ಪ್ರಕಾರ ಪುರುಷನು ಈ ವಿಮರ್ಶೆಯಲ್ಲಿ ಭಾಗಿಯಾಗುವ ರೀತಿ ಮೂರು:

೧. ಹೊಂದಿಕೆ (ಸಹಮತ) ಉದಾರವಾದಿ ಮಾನವತಾವಾದ
೨. ಅಧೀನ
೩. ನಿಯಂತ್ರಣ

ಸ್ತ್ರೀವಾದಿ ವಿಮರ್ಶೆಯಲ್ಲಿ ಪುರುಷ ಅವರ ಅಭಿಪ್ರಾಯಗಳಿಗೆ ಸಹಮತವನ್ನು ಒಪ್ಪಿಕೊಳ್ಳುವ ನೆಲೆಯಲ್ಲಿ ಹೊಂದಿಕೆಯ ದೃಷ್ಟಿಯಿಂದ ಸಂಜನಿತವಾದರೂ ಈ ಸಾಹಿತ್ಯಕ್ಕೆ ಪೂರಕವಾಗಿ ಸಹಕರಿಸಬಹುದು. ಪುರುಷನು ಸ್ತ್ರೀಯರ ಬರಹವನ್ನು ಸ್ತ್ರೀಯರಿಗೆ ಬೋಧಿಸುವುದರಿಂದ ಮಹಿಳೆಯರಿಗೆ ವಿಮರ್ಶೆಯ ಅಭ್ಯಾಸ ಸಾಧ್ಯವಾಗಬಹುದು. ಈ ಸಂಗತಿಯ ಬಗೆಗೆ ಮಾತ್ರ ನೀನಾ ಅವುರ್ ಬಾಕ್‌ಗೆ ತುಂಬಾ ಹೆದರಿಕೆಯಿದೆ. ಯಾಕೆಂದರೆ, ಈಕೆಯ ಪ್ರಕಾರ "ಗಂಡು ಸ್ತ್ರೀವಾದಿ ವಿಮರ್ಶೆಯನ್ನು ಗುರುತಿಸುವುದು ಸ್ತ್ರೀವಾದಿ ವಿಮರ್ಶೆಯನ್ನೇ ಅದೃಶ್ಯ ಮಾಡಿಬಿಡಬಹುದು". ಅನೇಕ ಸ್ತ್ರೀಯರು ಗಂಡನ್ನು ತಮಗಿಂತ ಕಿರಿಯರು ಎಂದೂ ಭಾವಿಸುತ್ತಾರೆ. ಹೀಗೆ ಭಾವಿಸುವುದರಿಂದ ಸಹಜವಾಗಿಯೇ ಗಂಡಿನ ಪ್ರಾಮುಖ್ಯತೆಯು ತಪ್ಪುತ್ತದೆ. ಮತ್ತು ಬರಿಯ ಸಹಮತ ವ್ಯಕ್ತಪಡಿಸುವಲ್ಲಿ ನಿಲ್ಲುತ್ತದೆ.

ಇಲ್ಲಿರುವ ಮತ್ತೊಂದು ಪ್ರಶ್ನೆಯೆಂದರೆ ಅನುಭವಕ್ಕೆ ವಾರಸುದಾರರು ಯಾರು ಎನ್ನುವುದು. ಸ್ತ್ರೀತ್ವದ ಚಾರಿತ್ರಿಕ ಅನುಭವ ಮತ್ತು ಓದುಗಳಾಗಿ ಸ್ತ್ರೀಯ ಅನುಭವದ ಕೇಂದ್ರದ ಮೂಲಕ ಬಿತ್ತರಗೊಳ್ಳುವ ಸ್ತ್ರೀವಾದಿ ವಿಮರ್ಶೆಯು ಅನುಭವದ ಅಥಾರಿಟಿಕೆಯ ಕುರಿತಂತೆ ನಿರ್ದಿಷ್ಟವಾಗಿ ಚರ್ಚಿಸುತ್ತದೆ. ಸ್ತ್ರೀತ್ವದ ಚಾರಿತ್ರಿಕ ಅನುಭವ ಮತ್ತು ಓದುಗಳಾಗಿ ಸ್ತ್ರೀಯ ಅನುಭವದ ಕೇಂದ್ರದಲ್ಲಿ ಗಂಡು ಬರುವುದಿಲ್ಲ. ಕಾರಣ ಈ ಅನುಭವ ಲೋಕದಲ್ಲಿ ಗಂಡು ಇಲ್ಲ. ಹೀಗಿದ್ದರೂ ಹೆಣ್ಣಾಗಿರುವುದೇ ಆಕೆಗೆ ಒಂದು ಮಾನದಂಡವನ್ನು ನಿಗದಿಪಡಿಸುವುದಿಲ್ಲ. ಇಲ್ಲಿಯೇ ಉಂಟಾಗುವ ಸಂದೇಹವೆಂದರೆ ಗಂಡು ಸ್ತ್ರೀವಾದಿ ವಿಮರ್ಶೆಯಲ್ಲಿ ಹೇಗೆ ಭಾಗವಹಿಸಬಹುದು? ಗಂಡಿಗೆ ಸ್ತ್ರೀ ಅನುಭವದ ನೇರ ಪರಿಚಯವಿಲ್ಲ. ಸ್ತ್ರೀ ಸಂಸ್ಕೃತಿಯ ದಟ್ಟ ಅನುಭವದ ಲೋಕ ಆತನಿಗಿಲ್ಲ. ಗಂಡು ಮಾಡಿದ ಪಾಪ ವಂಶಿಕವಾದುದು. ಅದು ಅವನ ಸ್ವಂತದ್ದಲ್ಲ.

ಸ್ತ್ರೀತ್ವದ ಅನುಭವ ರೂಪುಗೊಳ್ಳುವ ನೆಲೆಗಳನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಸ್ತ್ರೀ ಅನುಭವ ರೂಪುಗೊಳ್ಳುವುದು ಸಂಸ್ಕೃತಿ, ಬೌದ್ಧಿಕ ಮಟ್ಟ, ದೈಹಿಕ ಸ್ವರೂಪ, ಮಾನಸಿಕ ಅವಸ್ಥೆ ಇತ್ಯಾದಿಗಳಲ್ಲಿ. ಈ ನೆಲೆಯಿಂದ ಗಂಡು ಸಹಕರಿಸಬಹುದಾದುದು ಇಷ್ಟೆ : ಹೆಣ್ಣು ಇದನ್ನು ಓದಿದರೆ ಆಕೆಗೆ ಯಾವ ಭಾವನೆ ಇರಬಹುದು? ಇದನ್ನು ಹೆಣ್ಣು ಬರೆದಿದ್ದರೆ ಏನಾಗುತ್ತಿತ್ತು? ಸಾಂಪ್ರದಾಯಿಕ ಸಮಾಜದಲ್ಲಿ ಪ್ರಜ್ಞೆಯನ್ನು ರೂಪಿಸಿಕೊಂಡ

ಹೆಣ್ಣು ಕೂಡ ಈ ದೃಷ್ಟಿಯಿಂದ "ಹೆಣ್ಣಾ"ಗಬೇಕಾದ ಅವಶ್ಯಕತೆಯಿದೆ. ಹೀಗಾಗಿ ಸ್ತ್ರೀವಾದಿ ಒಂದು ಗಂಡಿನಿಂದಲೂ, ಹೆಣ್ಣಿನಿಂದಲೂ ಜೊತೆ ಜೊತೆಯಲ್ಲಿ ಸಾಗಬೇಕಾಗಿದೆ.

ಸ್ತ್ರೀವಾದಿ ವಿಮರ್ಶೆಯು ಹುಟ್ಟುವುದು ಕೂಡಾ ಚಾರಿತ್ರಿಕ ಅವಶ್ಯಕತೆಯ ಹಿನ್ನೆಲೆಯಿಂದಲೇ. ಸ್ತ್ರೀವಾದಿ ವಿಮರ್ಶೆಯೂ ಕೂಡಾ ಸಾಹಿತ್ಯವು ವಾಸ್ತವದ ಪ್ರತಿಬಿಂಬವನ್ನು ಗ್ರಹಿಸುವುದಕ್ಕಿಂತ ಹೆಚ್ಚಾಗಿ, ಸಾಹಿತ್ಯವು ನಿರ್ಮಾಣವೆಂದು ಅರ್ಥವಿಸುತ್ತದೆ. ಕೆಲವರು ಭಾವಿಸುವಂತೆ 'ಸ್ತ್ರೀ'ಯ ಬರವಣಿಗೆಯೂ ಸ್ತ್ರೀತ್ವದ – ಪ್ರತಿನಿಧಿ. ಗಂಡಸಿನ ಬರವಣಿಗೆಯ ಶೈಲಿಯು ಅಭಿವ್ಯಕ್ತಾತ್ಮಕವಾಗಿ ದೃಢತೆಯಿಂದ ಕೂಡಿರುತ್ತದೆ. ಸ್ತ್ರೀಯ ಬರವಣಿಗೆಯು ಮೆದು ಶೈಲಿಯನ್ನು ಹೊಂದಿರುವುದಕ್ಕೆ ಕಾರಣ ಅವಳ ಪ್ರಜ್ಞೆಯನ್ನು ನಿಯಂತ್ರಿಸುವ ಸಾಮಾಜಿಕ ಪರಿಸರ. ಹೀಗಾಗಿ ಸ್ತ್ರೀವಾದಿ ವಿಮರ್ಶೆಯು ನಿರಚನ ಸಿದ್ಧಾಂತವನ್ನು ಪ್ರಾರಂಭಿಸುವಾಗ ಕೃತಿ ಕಾದಂಬರಿಯಾಗಿದ್ದರೆ, ಪಾತ್ರ ಮತ್ತು ಶೈಲಿಯನ್ನು ಚರ್ಚಿಸುತ್ತದೆ. ಅದನ್ನು 'ನಿರಚನ 'ಗೊಳಿಸುತ್ತದೆ. ಕನ್ನಡದ ಸಂಚಿಯ ಹೊನ್ನಮ್ಮನ ಕಾವ್ಯದ ಶೈಲಿಯನ್ನು ಇಲ್ಲಿ ಗಮನಿಸಬಹುದು. ಆಕೆಯ ಕಾವ್ಯವು ರಚನೆಗೊಂಡ ಕಾಲ : ಸನ್ನಿವೇಶ, ಅರಸು ಮನೆತನದ ಸಾಂಪ್ರದಾಯಿಕ ಸಂಸ್ಕೃತಿಯ ನಡುವೆ ಆಕೆಯ ಕವಿತೆಯೂ ಹುಟ್ಟಿದ್ದು ಒಂದಂಶವಾದರೆ, ಎರಡನೆಯದು ಆಕೆಯ ಮೃದುವಾಗಿ ತಿದ್ದುವ ಮನೋಭಾವ. ಈ ಎರಡರ ದೆಸೆಯಿಂದಲೇ ಆಕೆಯ ಶೈಲಿಯು ರೂಪುಗೊಂಡಿದೆ ಮತ್ತು ನಿಲುವು ವ್ಯಕ್ತವಾಗಿದೆ.

ಸ್ತ್ರೀವಾದಿ ವಿಮರ್ಶೆಯು ಜಗತ್ತಿನ ಹೊರಗಿರುವಂತೆ ಭಾಸವಾಗುವ ಗಂಡಿಗೆ ಈ ವಿಮರ್ಶೆಯಲ್ಲಿ ತನ್ನ ಸ್ಥಾನವೇನು ಎಂದು ಗ್ರಹಿಸುವುದು ಕಷ್ಟವಾಗಿ ಕಾಣುತ್ತದೆ. ಆದರೆ, ಈ ಸಮಸ್ಯೆಯನ್ನು ಬಗೆಹರಿಸುವುದು ಸುಲಭ. ಸ್ತ್ರೀವಾದಿ ವಿಮರ್ಶೆಯಲ್ಲಿ ತೊಡಗಿಸುವುದು ಮೊದಲ ಪರಿಹಾರ. ಸ್ತ್ರೀವಾದಿ ವಿಮರ್ಶೆಗೆ ಎಲ್ಲವನ್ನು ಬದಲಾಗಿಸುವ ಗುಣವಿದೆ. ಚರಿತ್ರೆಯನ್ನು, ಸಾಹಿತ್ಯ ಸಂಸ್ಕೃತಿಯನ್ನು ಹೊಸ ದೃಷ್ಟಿಕೋನದಲ್ಲಿ ನೋಡುವ ಸ್ತ್ರೀವಾದಿ ವಿಮರ್ಶೆ ಕೇವಲ ಬದಲಾವಣೆಯಲ್ಲ, ಹೊಸ ಆಲೋಚನಾ ಕ್ರಮವೊಂದರ ಸೃಷ್ಟಿ.

## ಬಹುತ್ವವಾದ ಮತ್ತು ಸ್ತ್ರೀವಾದಿ ವಿಮರ್ಶೆ

೧೯೭೦ರ ನಂತರ ಸ್ತ್ರೀವಾದಿ ವಿಮರ್ಶೆಯಲ್ಲಿ ಮಹತ್ವದ ಬದಲಾವಣೆಯಾಗಿದೆ. ಸ್ತ್ರೀವಾದಿ ವಿಮರ್ಶೆಯ ಪರಿಕಲ್ಪನೆಯು ಈ ತನಕದ ಸ್ತ್ರೀವಾದಿ ವಿಮರ್ಶೆಯಲ್ಲಿ ಸ್ತ್ರೀವಾದ ಅನ್ನುವುದು ಸ್ತ್ರೀವಾದಿ ತಾತ್ವಿಕತೆ ಮತ್ತು ಉದಾರವಾದಿ ಮಾನವತಾವಾದದ ನಡುವಿನ ಸಂಬಂಧದಿಂದ ರೂಪುಗೊಂಡಿದೆ. ಆದರೆ ೧೯೭೦ರ ನಂತರ ನಿಜವಾಗಿಯೂ ಸ್ತ್ರೀವಾದಿ ವಿಮರ್ಶೆ ಎನ್ನುವುದು ಬೇರೆ ಬೇರೆ ರೀತಿಯ ಅನ್ವಯ ಕ್ರಮವನ್ನು ತಾತ್ವಿಕತೆಯನ್ನು ಒಳಗೊಳ್ಳಲು ಸಾಧ್ಯವಾಯಿತು. ಆದ್ದರಿಂದಲೇ ಇದನ್ನು ವಿಶಿಷ್ಟವಾದ ಸ್ತ್ರೀವಾದಿ ಓದು ಎನ್ನಬಹುದು.

ಉದಾಹರಣೆ: ಮೂರನೇ ಜಗತ್ತಿನ ಕಪ್ಪು ವಿಮರ್ಶಕ, ವಿಮರ್ಶಕಿಯರು ಈ ತನಕ ಇದ್ದ ಸಾಂಸ್ಕೃತಿಕ ವಾತಾವರಣವನ್ನು ಭೇದಿಸಿದರು. ಮತ್ತು ಸ್ತ್ರೀವಾದಿ ಸಾಹಿತ್ಯ ಮೀಮಾಂಸೆ ಎನ್ನುವುದನ್ನು ಕಟ್ಟಿದರು. ಮೂರನೇ ಜಗತ್ತಿನಲ್ಲಿ ಜನಾಂಗಿಕ ಮತ್ತು ಲೈಂಗಿಕ ರಾಜಕಾರಣ ಎನ್ನುವುದು ಅನಿವಾರ್ಯವೆಂಬುದನ್ನು ಪ್ರತಿಪಾದಿಸಿದರು.

ಮಾರ್ಕ್ಸ್‌ವಾದಿ ದೃಷ್ಟಿಕೋನದ ಸ್ತ್ರೀವಾದಿಗಳು ವರ್ಗದೃಷ್ಟಿಯೊಂದಿಗೆ ಸಾಹಿತ್ಯವನ್ನು ಉತ್ಪಾದನೆಯ ಮಾದರಿ ಎಂದೇ ಪರಿಗಣಿಸಿದ್ದಾರೆ. ಹೀಗಾಗಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯಲ್ಲಿ ಬೇರೆ ಬೇರೆ ರೀತಿಯ ಪರಿಕಲ್ಪನೆಗಳು ಹುಟ್ಟಿಕೊಂಡಿವೆ. ಫ್ರಾಯ್ಡ್ ಮತ್ತು ಲಕಾನ್ ದೃಷ್ಟಿಕೋನ ಇಟ್ಟುಕೊಂಡಿರುವ ಫ್ರೆಂಚ್ ಸ್ತ್ರೀವಾದಿ ವಿಮರ್ಶಕರು ಭಾಷೆ ಮತ್ತು ನಿರೂಪಣೆಯನ್ನು ವಿಭಿನ್ನ ರೀತಿಯಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. ಈ ದೃಷ್ಟಿಯಿಂದಲೇ ಒಂದು ಮಾತನ್ನು ಹೇಳಬಹುದು. ಸ್ತ್ರೀವಾದಿ ವಿಮರ್ಶೆ ಎನ್ನುವುದು ಎಲ್ಲಾ ಸಿದ್ಧಾಂತಗಳ ಜೊತೆ ಜೊತೆಗೆ ಒಪ್ಪಂದವನ್ನು ಮತ್ತು ಜಗಳವನ್ನು ಇಟ್ಟುಕೊಂಡಿದೆ ಮತ್ತು ಮೂಲಭೂತವಾಗಿ ಎಲ್ಲಾ ಸಿದ್ಧಾಂತಗಳೊಂದಿಗೆ ದ್ವಂದ್ವಾತ್ಮಕ ಸಂಬಂಧ ಇಟ್ಟುಕೊಂಡಿದೆ.

ಮೊದಮೊದಲಿಗೆ ಸ್ತ್ರೀವಾದಿ ವಿಮರ್ಶೆ ಎಂದರೆ ಸ್ತ್ರೀವಾದಿ ದೃಷ್ಟಿಕೋನ ಇಟ್ಟುಕೊಳ್ಳುವುದಾಗಿತ್ತು. ಸ್ತ್ರೀವಾದಿ ದೃಷ್ಟಿಕೋನವು ಅದರಷ್ಟಕ್ಕೆ ಅದು ತಳೆದುಕೊಂಡಿರುವ ಜವಾಬ್ದಾರಿಯಲ್ಲ. ಅದು ಎಷ್ಟರ ಮಟ್ಟಿಗೆ ಎಂದರೆ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯು ಅಧಿಕಾರದ ಜೊತೆಗೆ ಜಗಳ ಹೂಡುವುದರ ಮುಖಾಂತರವೇ ಸ್ವಅನನ್ಯತೆಯನ್ನು ಪಡೆಯುವುದು ಸಾಧ್ಯವಿದೆ.

ಸ್ತ್ರೀವಾದಿ ವಿಮರ್ಶೆಯಲ್ಲಿ ಎರಡು ವಿಶಿಷ್ಟ ಪರಿಕ್ರಮಗಳನ್ನು ನಾವು ನೋಡಬಹುದು.

೧) ಓದುಗಳಾಗಿ ಪಠ್ಯವನ್ನು, ಅದರಲ್ಲಿ ಬಂದಿರುವ ಸಾಂಕೇತಿಕತೆಯನ್ನು, ಅದರಲ್ಲಿರುವ ಪ್ರತಿಮಾತ್ಮಕತೆಯನ್ನು ಅಧ್ಯಯನ ಮಾಡುವುದು.

೨) ಸ್ತ್ರೀವಾದವೂ ಒಂದು ಗ್ರಹಿಕೆ. ಇದನ್ನು ಬೌದ್ಧಿಕವಾಗಿಯೂ ಗ್ರಹಿಸಿ ಪುನರ್ ನಿರ್ಮಿತ ವಲಯವನ್ನಾಗಿ ರೂಪಿಸಿಕೊಳ್ಳುವುದು. ಪುನರ್‌ಮೌಲ್ಯಮಾಪನ ಮಾಡುವುದು ಕೂಡಾ ಸ್ತ್ರೀ ದೃಷ್ಟಿಕೋನದಲ್ಲಿ ಮುಖ್ಯವಾದುದು ಎಂದು ಸಾಂಡ್ರಾ ಬಾಬರ್ಟ್ ಹೇಳುತ್ತಾಳೆ. ಒಟ್ಟಾರೆಯಾಗಿ ಸ್ತ್ರೀವಾದಿ ವಿಮರ್ಶೆಯ ನಿಲುವು ಧರ್ಮ ಮತ್ತು ಸಿದ್ಧಾಂತಗಳ ನಡುವಿನ ಪುನರ್ ವಿಮರ್ಶೆಯೇ ಆಗಿರುತ್ತದೆ.

**ಸ್ತ್ರೀತ್ವ: ಅದರ ವ್ಯಾಖ್ಯಾನ ಮತ್ತು ಮಹಿಳಾ ಸ್ವರೂಪ:**

ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯು ತನ್ನ ಹಿಂದಿನ ಎಲ್ಲಾ ಓದುಗಳನ್ನು ತಿರಸ್ಕರಿಸಿ

ಹೊಸ ಓದನ್ನಾಗಿ ಪರಿವರ್ತಿಸುತ್ತದೆ. ಒಬ್ಬ ಲೇಖಕಿಯಾಗಿ ಸ್ತ್ರೀ ಅನುಭವವನ್ನು ಅದು ಶೋಧಿಸಲು ಯತ್ನಿಸುತ್ತದೆ. ಇದರಲ್ಲಿ ಲೇಖಕಿಯ ಬರವಣಿಗೆ, ಸ್ತ್ರೀ ಬರಹದ ಕೌಶಲವನ್ನು ಪುನರ್ ಶೋಧಿಸುವುದು ಮುಖ್ಯವಾಗಿದೆ. ಸ್ತ್ರೀಯರ ಗುಣಾವಗುಣಗಳನ್ನು, ಅವರ ಸೃಜನಶೀಲತೆಯನ್ನು, ಮಾನಸಿಕ ಸ್ಥಿತ್ಯಂತರವನ್ನು ಅಧ್ಯಯನ ಮಾಡುವ ಕ್ರಮ.ಸ್ತ್ರೀವಾದದ ದೃಷ್ಟಿಯಿಂದ ಮುಖ್ಯವಾಗಿದೆ. ಈಗ ಇದು ಮುಖ್ಯವಾದ ಪರಂಪರೆಯಾಗಿ ರೂಪುಗೊಂಡಿದೆ. ಈ ರೀತಿ ರೂಪುಗೊಂಡ ಪದವೇ ಗೈನೋಕ್ರಿಟಿಕ್ಸ್ (Gynocritics) ಎನ್ನುವ ಪರಿಕಲ್ಪನೆ. ಈ ಗೈನೋಕ್ರಿಟಿಸಿಸಂ (Gynocriticism – ಸ್ತ್ರೀ ನಿಷ್ಠ ವಿಮರ್ಶೆ) ಸೈದ್ಧಾಂತಿಕವಾಗಿ ಅನೇಕ ಹೊಸ ಪಂಥಾಹ್ವಾನಗಳನ್ನು ಎದುರಿಸಿದೆ.

ಮೊದಮೊದಲಿಗೆ ಸ್ತ್ರೀವಾದ ಶೈಕ್ಷಣಿಕ ಶಿಸ್ತಾಗಿತ್ತು. ಅನಂತರ ಬದಲಾಗಿ ಇದು ಹೊಸ ಚಹರೆಯನ್ನು ಪಡೆಯಿತು. ಇದರಿಂದ ಸ್ತ್ರೀವಾದಿ ಚರಿತ್ರೆಯೇ ಹೊಸದಾಯಿತು.

ಸ್ತ್ರೀ ದೇಹ ಮತ್ತು ಅವರ ಬರವಣಿಗೆ, ಭಾಷೆ., ಅದು ಒಂದು ಪಥ್ಯದಲ್ಲಿ ಹಾದು ಹೋಗುವ ಕ್ರಮ ಇವುಗಳೆಲ್ಲವೂ ಸ್ತ್ರೀವಾದಿ ವಿಮರ್ಶೆಯಲ್ಲಿ ಹೊಸ ಚರ್ಚೆಯ ವಿಷಯವಾಗಿದೆ. ಯಾವುದೇ ದೃಷ್ಟಿಯಿಂದ ಸ್ತ್ರೀವಾದಿ ವಿಮರ್ಶೆಯೇನೂ ಇನ್ನುಳಿದ ಸಾಹಿತ್ಯ ಸಿದ್ಧಾಂತಕ್ಕಿಂತ ಕಡಿಮೆಯದಲ್ಲ ಎಂದು ಸ್ತ್ರೀವಾದಿ ವಿಮರ್ಶೆ ಪ್ರತಿಪಾದಿಸುತ್ತದೆ. ಸ್ತ್ರೀವಾದಿ ವಿಮರ್ಶೆ ಯಾವ ಬಗೆಯ ಸೈದ್ಧಾಂತಿಕ ವಿವರಗಳನ್ನು ಹೊಂದಿರುವುದು ಸಾಧ್ಯ ಎಂದು ಇವೊತ್ತಿನ ಸ್ತ್ರೀವಾದಿ ಸಾಹಿತ್ಯ ವಿಮರ್ಶಕರು ಚರ್ಚಿಸುತ್ತಾರೆ.

### ಸ್ತ್ರೀಯರ ಬರವಣಿಗೆ ಮತ್ತು ಸ್ತ್ರೀಯರ ದೇಹ

ಸ್ತ್ರೀ ಮತ್ತು ಪುರುಷರ ವ್ಯತ್ಯಾಸ ದೈಹಿಕವಾದದ್ದು. ಈ ದೈಹಿಕ ವ್ಯತ್ಯಾಸವು ಒಂದು ಕಾಲಕ್ಕೆ ಬೃಹತ್ ಪ್ರಶ್ನೆಯಾಗಿತ್ತು. ಹೆಣ್ಣಿನ ಮೆದುಳು ಮತ್ತು ಅವಳ ಸೃಜನಶೀಲ ಶಕ್ತಿ ಸಾಮರ್ಥ್ಯವು ಅವಳ ದೇಹದ ಕಾರಣದಿಂದಲೇ ನಿಯಂತ್ರಿತವಾಗುತ್ತದೆ ಎಂದು ಮೊದಮೊದಲು ಭಾವಿಸಲಾಗಿತ್ತು. ವಿಕ್ಟೋರಿಯನ್ ಕಾಲದ ಮಾನವಶಾಸ್ತ್ರಜ್ಞರು ಗಂಡಸರ ಮೆದುಳು ಹೆಂಗಸರ ಮೆದುಳಿಗಿಂತ ಭಾರವಾಗಿದೆ ಎಂದು ನಂಬಿದ್ದರು. ಆದರೆ ಇದೇ ಕಾರಣದಿಂದ ಹೆಂಗಸರು ಕೀಳು ಎಂದೇ ಪರಿಭಾವಿಸಲಾಗಿತ್ತು. ಮತ್ತು ಇದಕ್ಕೆ ತಾರತಮ್ಯ ದೃಷ್ಟಿಕೋನವೇ ಮುಖ್ಯವಾದ ಕಾರಣ. ಪಿತೃರೂಪಿ ಸಂಸ್ಕೃತಿಯ ಚಹರೆಗಳೇನೇ ಬರವಣಿಗೆಯಲ್ಲಿ ಸಾಂಕೇತಿಕವಾಗಿ ಅಭಿವ್ಯಕ್ತಿಗೊಳ್ಳುತ್ತದೆ ಎಂದು ಗಿಲ್ಬರ್ಟ್‌ನಂತಹ ಸ್ತ್ರೀವಾದಿ ವಿಮರ್ಶಕರು ಪರಿಗಣಿಸಿದ್ದು ಇದೆ. ಇದನ್ನು ಪ್ಯಾಲಿಕ್ ಸಂಕೇತಗಳೆಂದು ಆಗ ಭಾವಿಸಲಾಗಿತ್ತು. ಆದರೆ ಸಾಹಿತ್ಯಿಕ ಚಟುವಟಿಕೆಗೆ ಬರವಣಿಗೆಯೂ ಒಂದು ಮಾಧ್ಯಮ. ಇವುಗಳ ನಡುವೆ ಸಾದೃಶ್ಯಾತ್ಮಕ ಸಂಬಂಧಗಳು ಬೇರೆಯೆ ಇರುತ್ತವೆ. ಪಿತೃರೂಪಿ ಸಂಸ್ಕೃತಿಯೇ ಬರವಣಿಗೆಯನ್ನು ಕೂಡಾ ನಿಯಂತ್ರಿಸಿತ್ತು. ಆದರೆ ಸ್ತ್ರೀಯಲ್ಲಿ ಅಂತಸ್ಥವಾಗಿರುವ ಅನೇಕ ಅಂಶಗಳು ಬರವಣಿಗೆಯಲ್ಲಿ ಒಂದು ಪ್ರತಿಮಾತ್ಮಕ ಸ್ವರೂಪ ಪಡೆದುಕೊಳ್ಳಲು

ಕಾರಣವಾಗುತ್ತದೆ .

**ಸ್ತ್ರೀಯರ ಬರವಣಿಗೆ ಮತ್ತು ಭಾಷೆ:–**

ದೈಹಿಕ ವ್ಯತ್ಯಾಸದಿಂದ ಸ್ತ್ರೀಯರ ಮತ್ತು ಪುರುಷರ ಬರವಣಿಗೆಯ ಭಾಷೆ ಬೇರೆ. ಈ ದೃಷ್ಟಿಯಲ್ಲಿಯೇ ಫ್ರೆಂಚ್ Feministರ ಗಮನವಿದೆ. ಇದು ಸ್ತ್ರೀವಾದಿ ವಿಮರ್ಶಕರ ಮುಖ್ಯ ಬದಲಾವಣೆಯನ್ನು ಸೂಚಿಸುತ್ತದೆ. ಸ್ತ್ರೀಯೊಬ್ಬಳು ಬರವಣಿಗೆಗೆ ಬಳಸಿಕೊಳ್ಳುವ ಭಾಷೆಯು ಸ್ವಅನುಭವದ ಅಭಿವ್ಯಕ್ತಿಯ ಭಾಷೆಯಾಗಿರುತ್ತದೆ. ಸ್ತ್ರೀ ಬರವಣಿಗೆಯ ಭಾಷೆ ಸಹಜವಾದುದು. ಅವರ ಜೀವನ ಕ್ರಮಕ್ಕೆ ಒಪ್ಪಿತವಾದದ್ದು. ಅವರ ಭಾವಲೋಕಕ್ಕೆ ಸಂಬಂಧಿಸಿದ್ದು. ಈ ದೃಷ್ಟಿಯಿಂದ ಪುರುಷ ಮತ್ತು ಸ್ತ್ರೀಯರ ಸಂವಹನ ಮಾಧ್ಯಮ ಯಾವಾಗಲೂ ಭಿನ್ನವಾಗಿರುತ್ತದೆ.. ಸ್ತ್ರೀಯರು ಬಳಸುವ ಭಾಷೆ ಮತ್ತು ಪುರುಷರು ಬಳಸುವ ಭಾಷೆ ಸ್ವರೂಪದ ದೃಷ್ಟಿಯಿಂದಲೂ ಭಿನ್ನವಾದದ್ದು. ಸೃಜನಶೀಲ ಕ್ರಿಯೆಯೂ ಬೇರೆ. ಪುರುಷರು ಬಳಸುವ ಭಾಷೆ ಅವರು ಪರಂಪರಾಗತವಾಗಿ ಪಿತೃರೂಪಿ ಅಧಿಕಾರವನ್ನು ಪಡೆದುಕೊಂಡಿರುವುದರಿಂದ ಯಜಮಾನಿಕೆಗೆ ಸಂಬಂಧಿಸಿದ ಹಾಗೆ ರೂಪುಗೊಂಡಿರುತ್ತದೆ. ಆದರೆ ಮಹಿಳೆಯರು ಬಳಸುವ ಭಾಷೆ ಬೇರೆಯಾಗಿದ್ದು ಅದು ಅಪರಿಮಿತವಾದ ಪುನರ್ ಹುಡುಕಾಟಕ್ಕೆ ಅವಕಾಶ ಮಾಡಿಕೊಟ್ಟಿದೆ. ಈ ದೃಷ್ಟಿಯಿಂದ ಮಹಿಳಾ ಬರವಣಿಗೆಯ ಭಾಷೆ, ಅದರ ಹಿಂದಿರುವ ಸಂವೇದನೆ ಇವು ಕೇವಲ ಸಾಂಸ್ಕೃತಿಕವಾದ,ಶೈಕ್ಷಣಿಕವಾದ ವಿಚಾರಗಳಿಗೆ ಸಂಬಂಧಿಸಿದ್ದಲ್ಲ. ಸಾಮಾನ್ಯವಾಗಿ ಹೆಂಗಸರು ಬಳಸುವ ಭಾಷೆಯ ಚಹರೆಗಳು ಪುರುಷರು ಬಳಸುವ ಚಹರೆಗಳಿಗಿಂತ ಬೇರೆಯಾಗಿರುತ್ತವೆ. ಮತ್ತು ಅದರ ಅಭಿವ್ಯಕ್ತಿಯ ಮಾಧ್ಯಮವೂ ಭಿನ್ನವಾಗಿರುತ್ತದೆ. ಇದನ್ನೇ ಸ್ತ್ರೀತ್ವದ ಶೈಲಿ ಎಂದು ಕರೆಯುತ್ತೇವೆ. ಸ್ತ್ರೀಯರು ಬಳಸುವ ಭಾಷೆ, ಸಂವೇದನೆಯು ಭಿನ್ನವಾಗಿದೆ. ಈ ದೃಷ್ಟಿಯಿಂದ ಸ್ತ್ರೀಯರ ಮನಸ್ಸು ಮತ್ತು ಭಾಷೆ ಬೇರೆ ಎಂದು ಪರಿಗಣಿಸುವಂತಿಲ್ಲ.

**ಮಹಿಳಾ ಬರವಣಿಗೆ ಮತ್ತು ಮಹಿಳಾ ಮನಸ್ಥಿತಿ:–**

ಮನೋವೈಜ್ಞಾನಿಕ ದೃಷ್ಟಿಕೋನದಿಂದ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯನ್ನು ಮಾಡುವಾಗ ಮಹಿಳೆಯರ ಮನಸ್ಥಿತಿ ಮತ್ತು ಬರವಣಿಗೆಯ ಸೃಜನಶೀಲವಾದ ಬಿಕ್ಕಟ್ಟುಗಳನ್ನು ಕುರಿತಂತೆ ಚರ್ಚಿಸಬೇಕಾಗುತ್ತದೆ. ದೈಹಿಕ ಮತ್ತು ಭಾಷಿಕ ಮಾದರಿಗಳ ಕುರಿತು ಈಗಾಗಲೇ ಮನಃಶ್ಶಾಸ್ತ್ರೀಯ ದೃಷ್ಟಿಕೋನದಿಂದ ಬೇರೆ ಬೇರೆ ರೀತಿಯ ಚರ್ಚೆಗಳು ಬೆಳೆದು ಬಂದಿವೆ. ಒಂದು ಸಮಾಜದ ನಿರ್ದಿಷ್ಟವಾದ ಪರಿಸ್ಥಿತಿಯೊಳಗೆ ಸ್ತ್ರೀ ಪುರುಷರ ನಡುವಿನ ಸಂಬಂಧಗಳ ನಿರ್ವಚನಗಳನ್ನು ಬೇರೆ ಬೇರೆ ಮಾದರಿಯಲ್ಲಿ ವ್ಯಾಖ್ಯಾನಿಸಲಾಗಿದೆ. ಮನಃಶ್ಶಾಸ್ತ್ರಕ್ಕೆ ತನ್ನದೇ ಆದ ಕೊಡುಗೆ ನೀಡಿರುವ ಸಿಗ್ಮಂಡ್ ಫ್ರಾಯ್ಡ್. ಅಂತಿಮವಾಗಿ ಭಾಷೆ, ಸಂಸ್ಕೃತಿ ಮತ್ತು ಭ್ರಮಾಧೀನ ಜಗತ್ತು ಹಾಗೂ

ಮಹಿಳೆಯರ ನಡುವಿನ ಸಂಬಂಧವನ್ನು ಬೇರೊಂದು ರೀತಿಯಿಂದ ವ್ಯಾಖ್ಯಾನಿಸಿದ್ದಾನೆ. ಫ್ರಾಯ್ಡ್‌ನ ಸುಪ್ರಸಿದ್ಧ ಈಡಿಪಸ್ ಕಾಂಪ್ಲೆಕ್ಸ್ ಕಲ್ಪನೆಯು ತಾಯಿ ಮತ್ತು ಮಗನ ಮಧ್ಯದ ಲೈಂಗಿಕ ಸಂಬಂಧದ ಸಾಂಕೇತಿಕ ಅಭಿವ್ಯಕ್ತಿ ಎಂದು ಭಾವಿಸುತ್ತದೆ. ಆದರೆ ಜಾಕೋಸ್‌ಲಕಾನ್ ಎನ್ನುವ ಮನೋವಿಜ್ಞಾನಿ ಅದಕ್ಕೆ ತದ್ವಿರುದ್ಧವಾದ ನಿಲುವು ತಳೆದಿದ್ದು, ಭಾಷೆ ಅನ್ನುವುದೇ ಒಂದು ಸಾಂಕೇತಿಕ ವ್ಯವಸ್ಥೆಯೇ ಹೊರತು ಅದರಾಚೆಗೆ ಏನೂ ಅಲ್ಲ. ಈ ದೃಷ್ಟಿಯಿಂದ ಭಾಷೆ ಅನ್ನುವುದು ಗ್ರಹಿಸುವಾಗಲೇ ತಮ್ಮ ಮನೋ ವ್ಯಾಪಾರವು ಬೇರೆ ಬೇರೆ ಕೇಂದ್ರಗಳ ಮುಖಾಂತರ ಅನನ್ಯತೆಯನ್ನು ಸ್ಥಾಪಿಸಿಕೊಳ್ಳುತ್ತದೆ. ಜಾಕೂಸ್ ಲಕಾನ್‌ನ ಈ ಸಿದ್ಧಾಂತವನ್ನು ಸ್ವಲ್ಪ ಮಟ್ಟಿಗೆ ಕೆಲವರು ಒಪ್ಪಿಕೊಂಡಿದ್ದಾರೆ. ಭಾಷೆ ಎನ್ನುವುದೇ ಪಿತೃರೂಪಿ ಸಂಸ್ಕೃತಿಯ ಸಂಕೇತವಾಗಿದೆ. ಹಾಗೂ ಪಿತೃ ಸಂಸ್ಕೃತಿಗೆ ಅನುಗುಣವಾಗಿ ಭಾಷೆಗೆ ನಿರ್ದಿಷ್ಟವಾದ ಅರ್ಥಗಳನ್ನು ಕೊಡಲಾಗಿದೆ. ಹೀಗಾಗಿ ಭಾಷೆಯ ನಿಯಮಾವಳಿಯೂ ಕೂಡಾ ಒಂದರ್ಥದಲ್ಲಿ ಪಿತೃಪ್ರಧಾನ ಸಂಸ್ಕೃತಿಎಂಬ ವ್ಯವಸ್ಥೆಯ ಒಳಗಡೆ ಹೊಂದಿಕೊಂಡಿರುವುದರಿಂದ ಆ ನಿಯಮದಲ್ಲಿ ಸ್ತ್ರೀಯೊಬ್ಬಳು ತನ್ನನ್ನು ತಾನೇ ಹೇಗೆ ಗುರುತಿಸಿಕೊಳ್ಳಬಲ್ಲಳು ಎಂದು ಸ್ತ್ರೀವಾದಿಗಳು ಕೇಳುತ್ತಾರೆ.

ಮನಶ್ಶಾಸ್ತ್ರೀಯ ದೃಷ್ಟಿಕೋನದಿಂದ ವಿಮರ್ಶೆ ನಡೆಸುವ ಸ್ತ್ರೀವಾದಿಗಳು ಸ್ತ್ರೀತ್ವವನ್ನು ನಿರ್ದಿಷ್ಟ ವ್ಯಾಖ್ಯಾನ ಎನ್ನಲಾಗಿದ್ದು ಸ್ತ್ರೀತ್ವ ಎನ್ನುವುದನ್ನು ಒಂದು ಅವಗುಣವೆಂದು ಪರಿಗಣಿಸುವುದಿಲ್ಲ. ಮತ್ತು ಈಡಿಪಸ್ ಮಾದರಿಯಲ್ಲಿರುವಂತೆ ತಂದೆ ಮತ್ತು ಮಗನಿಗೆ ಸದಾ ದ್ವೇಷವೇ ಇರುತ್ತದೆ ಎಂದು ಪರಿಗಣಿಸಲಾಗುವುದಿಲ್ಲ. ಈ ದೃಷ್ಟಿಯಿಂದ ಬರವಣಿಗೆ ಎನ್ನುವುದು ಅವಳ ಅನುಭವ ಮತ್ತು ಸ್ತ್ರೀತ್ವದ ಅನನ್ಯತೆಯನ್ನು ಸೂಚಿಸುತ್ತಿರುತ್ತದೆ. (ಕನ್ನಡದಲ್ಲಿ ನವೋದಯ ಕಾಲದ ತಿರುಮಲಾಂಬ ಮೊದಲಾದ ಲೇಖಕಿಯರ ಬರವಣಿಗೆಯಲ್ಲಿ ಕಾಣಿಸಿಕೊಳ್ಳುವ ಸ್ತ್ರೀಪರ ನಿಲುವುಬೇರೆ. ಅವರು ಉದಾರವಾದಿ ಮಾನವತಾವಾದಿ ನೆಲೆಯಿಂದ ನೋಡಿರುವ ಸ್ತ್ರೀತ್ವದ ನೆಲೆಗಳು ಭಿನ್ನವಾಗಿರುತ್ತದೆ. ನವೋದಯಕ್ಕೆ ಸಂಬಂಧಿಸಿದಂತೆ ಸ್ತ್ರೀ ಶಿಕ್ಷಣ, ವಿಧವಾ ವಿವಾಹ ಮೊದಲಾದ ವೈಚಾರಿಕ ಹಂದರಗಳು ತಿರುಮಲಾಂಬಾ ಮೊದಲಾದವರ ಬರವಣಿಗೆಯಲ್ಲಿ ಕಾಣಿಸಿತು.) ಒಂದು ಕಾಲಘಟ್ಟದ ಸ್ತ್ರೀವಾದಿ ಲೇಖಕಿಯರ ಮನೋಭಾವಗಳು, ಅವರ ಏಕಾಂತ, ಗಂಡಸಿನ ದಬ್ಬಾಳಿಕೆ ಇವು ಎಲ್ಲವೂ ನೇರವಾಗಿ ಸ್ತ್ರೀವಾದಿ ಓದುಗರಿಗೆ ಸಂಬಂಧಪಡದೇ ಇದ್ದರೂ ಸ್ತ್ರೀ ಸಂಬಂಧದ ರೂಪಗಳು ಇಂಥಲ್ಲಿ ಬೇರೆಯಾಗಿರುತ್ತವೆ. ಮತ್ತು ಈ ಬರವಣಿಗೆಯಲ್ಲಿ ಒಂದು ಸಣ್ಣ ಸ್ವನಾಟಕೀಯತೆಯ ಸ್ವರೂಪ, ಅಭಿವ್ಯಕ್ತಿಯ ಕ್ರಮದಲ್ಲಿರುವ ಕೀಳರಿಮೆ ಮತ್ತು ಅಸ್ತಿತ್ವಕ್ಕೆ ನಡೆಸುವ ಹೋರಾಟ ಭಾಷೆಯ ಮುಖೇನ ಅಭಿವ್ಯಕ್ತವಾಗುತ್ತದೆ. ಇಂತಹ ಸಂದರ್ಭದಲ್ಲಿ ಸ್ತ್ರೀಯರ ಸ್ವಅನನ್ಯತೆಯ ಅಭಿವ್ಯಕ್ತಿಗೆ ಅದರದೇ ಆದ ಚಹರೆಗಳಿರುತ್ತವೆ. ಭಾಷೆಯನ್ನು ಕಲಿಯುವ ಕ್ರಮದಲ್ಲಿ ಒಬ್ಬಳು ಹುಡುಗಿ ಮತ್ತು ಒಬ್ಬ ಹುಡುಗನ ಕ್ರಮಕ್ಕೂ ವ್ಯತ್ಯಾಸವಿದೆ. ಹುಡುಗ ಭಾಷೆಯಲ್ಲಿ ತನ್ನ ಅಧಿಕೃತ ಚಹರೆ

ಸ್ಥಾಪಿಸಿದರೆ ಭಾಷೆಯಲ್ಲೇ ಸ್ತ್ರೀ ತನ್ನ ಪರಕೀಯತೆಯನ್ನು ಅನುಭವಿಸುತ್ತಾಳೆ. ಆದರೆ ಎಲ್ಲರ ಮನೆಯಲ್ಲೂ ಮಗುವಿನ ಹಿತ ಸಂರಕ್ಷಣೆಯನ್ನು ತಾಯಿಯೇ ಮಾಡುತ್ತಾಳೆಂಬುದನ್ನು ಮರೆಯಲಾಗದು. ಇದೇ ದೃಷ್ಟಿಯಲ್ಲಿಯೇ ಸ್ತ್ರೀವಾದಿ ಚರ್ಚೆ ಶುರುವಾಗುವುದು. ಬರವಣಿಗೆ ಎನ್ನುವುದು ಸ್ತ್ರೀಯರಿಗೆ ಅವರ ಅನನ್ಯತೆಯ ದ್ಯೋತಕ.ಬರಹವನ್ನು ಸ್ತ್ರೀಯು ಅದು ತನ್ನದೇ ಕೂಸು ಎಂಬಂತೆ ಪರಿಭಾವಿಸುತ್ತಾಳೆ. ಈ ದೃಷ್ಟಿಯಿಂದ ಇದು ಮಹತ್ವಪೂರ್ಣ ಅಡಿಗಲ್ಲಾಗಿದೆ. ಸಾಮಾಜಿಕ, ಸಾಂಸ್ಕೃತಿಕ, ಚಾರಿತ್ರಿಕ ಬದಲಾವಣೆಯ ಮುಖ್ಯ ಪ್ರತಿಮೆಯಾಗಿ ಈ ಕಲ್ಪನೆಯು ಕೆಲಸ ಮಾಡುತ್ತದೆ.

**ಮಹಿಳಾ ಬರವಣಿಗೆ ಮತ್ತು ಸಂಸ್ಕೃತಿ:**

ಮಹಿಳಾ ಬರವಣಿಗೆ ಮತ್ತು ಮಹಿಳಾ ಸಂಸ್ಕೃತಿ ಸ್ತ್ರೀವಾದವು ಚರ್ಚೆ ಶುರು ಮಾಡುವಾಗಲೇ ದೈಹಿಕ ವ್ಯತ್ಯಾಸ, ಬರವಣಿಗೆಯ ಕ್ರಮ, ಭಾಷೆ ಮನೋವಿಜ್ಞಾನ ಇತ್ಯಾದಿಗಳನ್ನು ಜೊತೆಜೊತೆಯಾಗೇ ಪರಿಗಣನೆಗೆ ತೆಗೆದುಕೊಳ್ಳುವುದು. ಒಂದು ಸಂಸ್ಕೃತಿಯ ಹುಟ್ಟಿನಲ್ಲಿ ಮತ್ತು ಬೆಳವಣಿಗೆಯಲ್ಲಿ ಯಾಜಮಾನಿಕ ದೃಷ್ಟಿಕೋನದ ಸಾಂಸ್ಕೃತಿಕ ನಿರ್ದೇಶನದ ಹೊರತಾಗಿ ಮಹತ್ವದ ಪಾತ್ರ ನಿರ್ವಹಿಸಲು ಸ್ತ್ರೀವಾದಿ ದೃಷ್ಟಿಕೋನದ ವಿಮರ್ಶಕರಿಗೆ ಸಾಧ್ಯವಾಗಿದೆ. ಸ್ತ್ರೀ ಸಂಸ್ಕೃತಿ ಮತ್ತು ಸಾಂಸ್ಕೃತಿಕ ಅನುಭವ ಹೇಗೆ ಬರವಣಿಗೆಯಲ್ಲಿ ರೂಪುಗೊಳ್ಳುತ್ತದೆ ಎಂಬುದನ್ನು ಅವರು ಚರ್ಚಿಸುತ್ತಾರೆ. ಒಂದು ಸಮಾಜದಲ್ಲಿರುವ ಹೈರಾರ್ಕಿಯನ್ನು ಅವರು ನಿರಾಕರಿಸುತ್ತಾರೆ. ಯಜಮಾನಿಕ ದೃಷ್ಟಿಯು ಹೆಣ್ಣನ್ನು ಸಂಸ್ಕೃತಿಯ ಕೇಂದ್ರ ಬಿಂದು ಎಂದು ಪರಿಗಣಿಸುವುದಿಲ್ಲ. ಹೀಗಾಗಿ ಅದಕ್ಕಾಗಿ ತಕ್ಕ ಮೌಲ್ಯಗಳನ್ನು ಹೇರಲಾಗಿದೆ. ಚರಿತ್ರೆ, ಸಂಸ್ಕೃತಿ ಇತ್ಯಾದಿ ಎಲ್ಲವೂ ಪುರುಷ ಕೇಂದ್ರಿತವಾಗಿದ್ದು ಮಹಿಳಾ ಕೇಂದ್ರಿತ ದೃಷ್ಟಿಕೋನದಲ್ಲಿ ನೋಡಬೇಕೆಂದು ಸ್ತ್ರೀವಾದಿಗಳು ಹೇಳುತ್ತಾರೆ. ಆದರೆ ಇದು ಮಹತ್ವದ ಜವಾಬ್ದಾರಿ ಎನ್ನುವುದು ಅವರಿಗೆ ಗೊತ್ತಿದೆ. ಮಹಿಳಾ ಸಂಸ್ಕೃತಿ ಎಂದರೆ ಒಂದು ಸಮೂಹದ ಮೌಲ್ಯ ಸಂಬಂಧ ಸಂವಾದದ ಮಾಧ್ಯಮವನ್ನಾಗಿ ಬಳಸಿಕೊಳ್ಳಬೇಕಾದ ಅಗತ್ಯವಿದೆ. ಚರಿತ್ರೆಯೆಂಬ ಪರಿಕಲ್ಪನೆಯನ್ನು ನೋಡಿ– ಈ ಪರಿಕಲ್ಪನೆಯಲ್ಲಿ ಸ್ತ್ರೀ ಗೈರು ಹಾಜರಿಯಾಗಿದ್ದಾಳೆ. ಅದಕ್ಕಾಗಿ ಮಹಿಳಾ ದೃಷ್ಟಿಕೋನವನ್ನು ಒಳಗೊಂಡ ಸಮಾಜದ ಮತ್ತು ಸಂಸ್ಕೃತಿಯ ಅಧ್ಯಯನ ಅಗತ್ಯವಾಗಿದೆ ಸ್ತ್ರೀವಾದಿಗಳು ಎಂದು ವಾದಿಸುತ್ತಾರೆ. ಒಂದು ಸಂಸ್ಕತಿಯೊಳಗೆ ಸ್ತ್ರೀ ಪುರುಷರಿಗೆ ಸಮಾನ ತತ್ವಗಳಿರಬಹುದು. ಆದರೆ ಇದರೊಟ್ಟಿಗೆ ಸ್ತ್ರೀ ಸಂಸ್ಕೃತಿ ಕೆಲವೊಮ್ಮೆ ತನ್ನ ಅನನ್ಯತೆ ಕಾಪಾಡಿಕೊಳ್ಳುತ್ತದೆ. ಇದನ್ನೇ ಸ್ತ್ರೀವಾದಿಗಳು ಅವಕಾಶ ಎಂದು ಕರೆಯುತ್ತಾರೆ. ಇದರಿಂದಾಗಿಯೇ ಒಂದು ಭಾಷಿಕ ನೆಲೆ ಹಾಗೂ ಸಾಂಕೇತಿಕ ನೆಲೆಯನ್ನು.. ಸಾಂಸ್ಕೃತಿಕ ನೆಲೆಗಳನ್ನು ಪುನರ್ ಕಟ್ಟಬೇಕಾಗುತ್ತದೆ. ಸ್ತ್ರೀವಾದವನ್ನು ತೀವ್ರವಾಗಿ ಪ್ರತಿಪಾದಿಸಬೇಕಾಗುತ್ತದೆ. ಹಾಗೆ ನೋಡುವುದಿದ್ದರೆ ಒಂದು ಸಮಾಜ ಮತ್ತು ಸಂಸ್ಕೃತಿಯಲ್ಲಿ ಸ್ತ್ರೀ ವಹಿಸಿಕೊಳ್ಳುವ ಪಾತ್ರ ಯಾವತ್ತೂ

ಏಕಮುಖವಾದುದಲ್ಲ. ಅದಕ್ಕೆ ದ್ವಿಮುಖವಾದ ಸಂವಾದಗಳಿರಬೇಕು. ಮತ್ತು ಮಹಿಳೆಯು ಕೂಡಾ ಈ ದೃಷ್ಟಿಯಿಂದ ಸಾಂಸ್ಕೃತಿಕ ಮಹತ್ವ ಪಡೆಯಬೇಕಾಗುತ್ತದೆ. ಮಹಿಳಾ ಬರವಣಿಗೆಯೆನ್ನುವುದು ಈ ಕಾರಣದಿಂದ ಮಹಿಳಾ ಸಂಸ್ಕೃತಿಯೊಂದರ ಪ್ರತೀಕವೂ ಆಗಿರುತ್ತದೆ. ಮಹಿಳೆಯ ಬರವಣಿಗೆಯು ಅನೇಕ ಭಾವನೆಗಳನ್ನು ಸುಪ್ತವಾಗಿರಿಸಿಕೊಂಡಿರು ವುದನ್ನು ನೋಡಬಹುದು. ಮೌನ ಮತ್ತು ಪದಸೃಷ್ಟಿ ಮಾಡುವ ದ್ವಿಮುಖ ನಿಲುವನ್ನು ಸಾಂದರ್ಭಿಕವಾಗಿ ಗಮನಿಸಬೇಕಾಗಿದೆ. ಸ್ತ್ರೀಯರು ಬರೆಯುವ ಬರವಣಿಗೆಯ ಆಚೆಗೂ ಅನೇಕ ಪಠ್ಯಗಳು ಉಳಿದಿರಬಹುದು. ಆ ಮೌನವನ್ನು ಸ್ತ್ರೀ ಸಂಸ್ಕೃತಿಯ ಜೊತೆಗೆ ಗುರುತಿಸುವ ಅಗತ್ಯವಿದೆ. ಈ ದೃಷ್ಟಿಯಿಂದ ಲೇಖಕಿಯರು ಬರೆಯುವ ವಸ್ತು, ಅದರ ನಿರೂಪಣೆ ಬೇರೆ ಮಾದರಿಯನ್ನು ಒಳಗೊಳ್ಳಬೇಕಾಗುತ್ತದೆ. ಇದನ್ನು ಸಾಂಸ್ಕೃತಿಕವಾಗಿ ಗಮನಿಸುವ ಅಗತ್ಯವಿದೆ. ಇದು ಸಾಂಸ್ಕೃತಿಕ ಮನಶ್ಶಾಸ್ತ್ರ, ಸ್ತ್ರೀ ವಾದಿ ವಿಮರ್ಶೆ, ಸಂಸ್ಕೃತಿಯ ಚರ್ಚೆ ಈ ಎಲ್ಲದಕ್ಕೂ ಬಹಳ ದೊಡ್ಡ ಪಂಥಾಹ್ವಾನವಾಗಿದೆ. ಈ ದೃಷ್ಟಿಯಿಂದ ಸ್ತ್ರೀವಾದಿ ವಿಮರ್ಶೆಯು ಇನ್ನೂ ಕಾಲಿಡಬೇಕಾಗಿದೆ.(೨೦೦೩)

## ಓದುಗ ಕೇಂದ್ರಿತ ವಿಮರ್ಶೆ ಮತ್ತು ಸ್ತ್ರೀವಾದ

- ಸ್ತ್ರೀವಾದದ ೩ ಹಂತಗಳ ಚರ್ಚೆಯನ್ನು ಜೂಲಿಯ ಕ್ರಿಸ್ಟೇವ ಮಾಡುತ್ತಾಳೆ
  ೧) ಪುರುಷ ಬರಹಗಾರರ ಬರಹಗಳ ವಿಧಿವಿಧಾನಗಳನ್ನು ಚರ್ಚಿಸುವುದು
  ೨) ಮಹಿಳಾ ಬರವಣಿಗೆಯ ರೂಪಗಳನ್ನು ಪುನರ್ ಚರ್ಚಿಸುವುದು
  ೩) ಲಿಂಗ ವಿಭಜನೆಯ ಆಧಾರದಲ್ಲಿ ರೂಪಗೊಂಡ ಬರಹ ರೂಪಗಳನ್ನು ಚರ್ಚಿಸುವುದು
- ಓದುಗ ಕೇಂದ್ರಿತ ಮತ್ತು ಸ್ತ್ರೀವಾದಿ ಚರ್ಚೆಯ ಸಂದರ್ಭದಲ್ಲಿ ಮಿಲೆಟ್ ಪಠ್ಯಗಳನ್ನು ಅವುಗಳ ಪಾಡಿಗೆ ಅವು ಮಾತನಾಡಲು ಬಿಡಿ ಎಂದುಕೊಳ್ಳುತ್ತಾರೆ.
- ಲೈಂಗಿಕ ರಾಜಕಾರಣ ಎನ್ನುವುದು ಓದಿನ ಮೇಲೆ ಪ್ರಭಾವವನ್ನು ಬೀರಿದೆ
- ಮಹಿಳಾ ಪ್ರಜ್ಞೆಯನ್ನು ಕೂಡ ಪಿತೃರೂಪಿ ಸಂಸ್ಕೃತಿಯು ನಿಯಂತ್ರಿಸಿದೆ. ಈ ದೃಷ್ಟಿಯಿಂದ ಸ್ತ್ರೀಯ ಓದಿನ ಕ್ರಮವು ಬೇರೆಯಾಗಬೇಕಾಗಿದೆ.
- ಪಿತೃರೂಪಿ ಸಂಸ್ಕೃತಿಯ ಒಳಗಡೆ ಬರೆಯುವ ಲೇಖಕರು ಸ್ತ್ರೀ ಪಾತ್ರವನ್ನು ಸ್ತ್ರೀಯರ ಅನುಭವ ಜಗತ್ತನ್ನು ನಿಯಂತ್ರಿಸಿದ್ದಾರೆ. ಅದನ್ನು ಭಂಜಿಸಬೇಕಾಗಿದೆ.
- ದೈಹಿಕವಾಗಿ ಹೆಣ್ಣು ಹೇಗೆ ಬೇರೆಯಾಗುತ್ತಾಳೋ ಹಾಗೆಯೇ ಕೃತಿಯನ್ನು ಓದುವಾಗಲೂ ಬೇರೆಯಾಗುತ್ತಾಳೆ.
- ಮಹಿಳಾ ವಾದಿ ಓದಿನಲ್ಲಿ ಮಹಿಳೆಯರ ಅನುಭವ ಎನ್ನುವುದು ಹೆಚ್ಚು ಮುಖ್ಯ

ಕೃತಿಯೊಂದರ ಪ್ರತೀಕಾತ್ಮಕ ಚರ್ಚೆಯ ಸಂದರ್ಭಗಳನ್ನು ಸ್ತ್ರೀಯರು ಮರೆಯಬೇಕಾಗುತ್ತಿದೆ.

- ಸ್ತ್ರೀಯರು ಓದುವಾಗ ಪುರುಷರ ನಿರೀಕ್ಷೆಗೆ ಅನುಸಾರವಾಗಿ ಓದುವ ಅಪಾಯವಿದೆ.
- ಓದಿನ ಸಂದರ್ಭದಲ್ಲಿ ಪ್ರತಿಯೊಬ್ಬ ಮಹಿಳೆಯು ತನ್ನ ಓದಿನ ಮುಕ್ತವಾದ ಸ್ವಾತಂತ್ರ್ಯವನ್ನು ಇಟ್ಟುಕೊಳ್ಳಬೇಕಾಗುತ್ತದೆ.
- ಸ್ತ್ರೀವಾದಿ ದೃಷ್ಟಿಕೋನದ ಓದುಗ ಚರ್ಚೆಯಲ್ಲಿ ಚರಿತ್ರೆ ಮತ್ತು ಸಾಹಿತ್ಯದ ಮೌಲ್ಯಮಾಪನವು ಬೇರೆಯಾಗಬೇಕಾಗುತ್ತದೆ.
- ಪ್ರತಿಯೊಂದು ಸಂದರ್ಭದಲ್ಲೂ ಪಠ್ಯವನ್ನು ಮಹಿಳೆಯು ಸ್ವೀಕರಿಸುವಾಗ ಅದನ್ನು ಬರೆದವನು ಉದ್ದೇಶಕ್ಕೆ ತಕ್ಕಂತೆ ಸ್ವೀಕರಿಸಬೇಕಾಗುತ್ತದೆ.
- ಲೇಖಕನ ನಿಜವೇ ಮಹಿಳಾ ಓದುಗರ ನಿಜವಾಗಬೇಕಿಲ್ಲ.
- ಮಹಿಳೆಯರು ಓದುವಾಗ ಈಗಾಗಲೆ ಓದಿನ ಕ್ರಮವನ್ನು ಹೇಗೆ ನಿರ್ಧರಿಸಲಾಗಿದೆ. ಆ ತರಹ ಓದಬೇಕಾಗಿಲ್ಲ.
- ಓದಿನ ಸಂದರ್ಭದಲ್ಲಿ ಮಹಿಳೆಯು ಪಠ್ಯದ ಜೊತೆಗೆ ನಿಜವಾದ ಅನುಸಂಧಾನವನ್ನು ಮಾಡಬೇಕಾಗುತ್ತದೆ.
- ಭಾಷೆ ಮತ್ತು ಅದರ ಪ್ರತಿಮಾತ್ಮಕ ತರ್ಕಗಳು ಅನೇಕ ಸಂದರ್ಭದಲ್ಲಿ ಬೇರೆ ರೀತಿಯಲ್ಲಿಯೂ ಇರುವುದಕ್ಕೆ ಸಾಧ್ಯ.
- ಮಹಿಳೆಯು ಓದುವಾಗ ಸಂಕೇತಶಾಸ್ತ್ರದ ತರ್ಕಗಳನ್ನು ಇಟ್ಟುಕೊಂಡೆ ಓದಬೇಕಾಗಿಲ್ಲ. ಈಗಾಗಲೇ ಸಾಹಿತ್ಯದಲ್ಲಿ ಹೇಳಲಾಗಿರುವ ಅರ್ಥಕ್ಕಿಂತ ಹೇಳದಿರುವ ಅರ್ಥಗಳನ್ನು ಗಮನಿಸಬೇಕಾದ ಅಗತ್ಯವಿರುತ್ತದೆ.
- ಪಿತೃರೂಪಿ ಸಂಸ್ಕೃತಿಯು ಹೇಳಿರುವ ಸಾಹಿತ್ಯಿಕ ಮೌಲ್ಯಕ್ಕಿಂತಲೂ ಹೆಣ್ಣಿನ ನಿಜವಾದ ಅಸ್ತಿತ್ವದ ಹುಡುಕಾಟ ಓದಿನಲ್ಲಿ ಸಾಧ್ಯವಾಗಬೇಕಾಗಿದೆ.
- ಲೈಂಗಿಕ ರಾಜಕಾರಣ ಎನ್ನುವುದು ಸಾಹಿತ್ಯದ ಗ್ರಹಿಕೆಯ ಮೇಲೆ ಪ್ರಭಾವವನ್ನು ಬೀರಿದೆ.
- ಪುರುಷರು ಬರೆದ ಅನೇಕ ಕೃತಿಗಳಲ್ಲಿ ಹೆಣ್ಣಿನ ದೈಹಿಕ ವಿವರಣೆಯು ಹೆಚ್ಚಿರುತ್ತದೆ. ಈ ರೀತಿ ಪಠ್ಯಗಳನ್ನು ಓದುವಾಗ ಗಂಡು ಸ್ವಲ್ಪ ಹೆಣ್ಣಿನ ದೈಹಿಕ ಆಕರ್ಷಣೆಗೆ ಗುರಿಯಾಗಿ ಅದಕ್ಕೆ ತಕ್ಕಂತೆ ಓದಬಹುದು ಆದರೆ ಮಹಿಳೆಯೊಬ್ಬಳು ಈ ತರಹದ ಕೃತಿಯನ್ನು ಓದುವಾಗ ಬೇರೆ ರೀತಿಯಲ್ಲಿಯೂ ಓದಲು ಸಾಧ್ಯತೆಗಳಿರುತ್ತವೆ.
- ಬರವಣಿಗೆ ಎಂದರೆ ಹೇಗೆ ನಿರ್ದಿಷ್ಟ ಅರ್ಥದ ದ್ಯೋತಕವಲ್ಲವೋ ಹಾಗೆ ಓದು

ಕೂಡ ನಿರ್ದಿಷ್ಟ ಅರ್ಥದ ದ್ಯೋತಕವಲ್ಲ.

- ಮಹಿಳೆಯು ಬರಹವನ್ನು ಓದುವಾಗ ತನ್ನ ಮನಸ್ಥಿತಿಗೆ ಅನುಗುಣವಾಗಿ ಓದುತ್ತಾಳೆ. ಈ ದೃಷ್ಟಿಯಿಂದ ರಚನೋತ್ತರ ಸಂದರ್ಭದಲ್ಲಿ ಮಹಿಳಾವಾದಿಗಳು ಓದು ಬರಿ ಬರವಣಿಗೆಯ ಜೊತೆಗೆ ಮಾತ್ರವೆ ಅನುಸಂಧಾನ ಮಾಡುವ ಪ್ರಕ್ರಿಯೆಯಲ್ಲ ಮನೋಸ್ಥಿತಿಯ ಅನುಸಂಧಾನವೂ ಹೌದು ಎಂದು ಹೇಳುತ್ತಾರೆ.

**ಪ್ರಯೋಗ :**

**ವಸಾಹತೋತ್ತರ ಕಾಲದ ಸಮಸ್ಯೆ ಮತ್ತು ಮೀಯುವ ಆಟ : ಸ್ತ್ರೀವಾದಿ ಓದು**

ಎಚ್. ನಾಗವೇಣಿಯವರ 'ಮೀಯುವ ಆಟ' ಬಂದಿರುವುದು ೨೦೦೫ ರಲ್ಲಿ. ಅದಕ್ಕಿಂತ ಮೊದಲು ಅವರ 'ಗಾಂಧಿ ಬಂದ ' ಕಾದಂಬರಿ ಹಾಗೂ 'ನಾಕನೇ ನೀರು' ಕೃತಿಗಳು ಬಂದಿದ್ದು ಓದುಗರ ಗಮನ ಸೆಳೆದಿತ್ತು. 'ಗಾಂಧಿ ಬಂದ' ಕಾದಂಬರಿ ವಾಸ್ತವತಾವಾದದಿಂದ ಬಂದ ಕಾದಂಬರಿಯಾಗಿದ್ದು ಲಿಂಗತಾರತಮ್ಯ ನೀತಿಯನ್ನು ವಿಶಿಷ್ಟವಾಗಿ ಮಂಡಿಸುತ್ತದೆ. ವಾಸ್ತವತೆಯನ್ನು ಅರ್ಥಮಾಡಿಕೊಳ್ಳುವಾಗ ಗಂಡಸರು ಅದನ್ನು ಅರ್ಥಮಾಡಿಕೊಳ್ಳುವುದಕ್ಕೂ, ಸ್ತ್ರೀಯರು ಅರ್ಥಮಾಡಿಕೊಳ್ಳುವುದಕ್ಕೂ ಭಿನ್ನತೆಯಿದೆ. ಅಂದರೆ ಸ್ತ್ರೀಯರು ಅವರು ನಿಜವಾಗಿಯೂ ಸ್ತ್ರೀವಾದಿಯಾಗಿದ್ದಾಗ ವಾಸ್ತವತೆಯಲ್ಲಿ ಅಡಕವಾಗಿರುವ ಪಿತೃ ಸಂಸ್ಕೃತಿಯ ಎಳೆಯನ್ನು ಸೂಕ್ಷ್ಮವಾಗಿ ಮಂಡಿಸಲು ಸಾಧ್ಯ. ಅದೇ ವಾಸ್ತವತೆಯನ್ನು ಪುರುಷಕೇಂದ್ರಿತ ದೃಷ್ಟಿಕೋನವು ಇರುವ ವ್ಯವಸ್ಥೆಯನ್ನು ಇರುವ ಹಾಗೆ ಮಂಡಿಸುವುದು ಮಾತ್ರವಲ್ಲ. ಅದರಲ್ಲಿ ಹೆಣ್ಣಿನ ನೋವು ಎಷ್ಟು ಮಡುಗಟ್ಟಿದೆಯೆಂದು ಅರ್ಥಮಾಡದೆ ಹೋಗಬಹುದು. ಈ ದೃಷ್ಟಿಯಿಂದ ಸಮಕಾಲೀನ ವಾಸ್ತವದ ಚರಿತ್ರೆಯನ್ನು ಅದರಲ್ಲಿರುವ ತಾರತಮ್ಯ ನೀತಿಗಳನ್ನು ಅರ್ಥಮಾಡಿಕೊಳ್ಳಲು ಅನುಕೂಲ ಕಲ್ಪಿಸುವ ಸಾರಾ ಅವರ 'ಚಂದ್ರಗಿರಿಯ ತೀರದಲ್ಲಿ', 'ಸಹನಾ', 'ಚಪ್ಪಲಿಗಳು', ಚಂಪಾವತಿಯವರ 'ಶಿವಗಂಗಾ' ಮುಂತಾದ ಕೃತಿಗಳ ಸಾಲಿನಲ್ಲಿಯೇ 'ಗಾಂಧಿ ಬಂದ' 'ಮೀಯುವ ಆಟ' ಕೃತಿಗಳೂ ನಿಲ್ಲುತ್ತವೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಲೇಖಕಿಯರು ಬರೆಯತೊಡಗಿದ ವಿಷಯಗಳು; ಅವರ ಬರಹದ ರೂಪ ತುಂಬಾ ಕುತೂಹಲ ಹುಟ್ಟಿಸುತ್ತದೆ. ಲೇಖಕಿಯರಲ್ಲಿ – ವಿಮರ್ಶಕಿಯರಿದ್ದಾರೆ. ಸಣ್ಣ ಕತೆಗಾರ್ತಿಯರಿದ್ದಾರೆ. ಕಾದಂಬರಿಗಾರ್ತಿಯರಿದ್ದಾರೆ. ಪತ್ರಿಕೆಯ ಸಂಪಾದಕಿಯರಿದ್ದಾರೆ. ಸಿನಿಮಾ ನಿರ್ದೇಶಕಿಯರಿದ್ದಾರೆ. ಅಂದರೆ ಅವರು ಶೈಕ್ಷಣಿಕ ವಲಯ ಬೌದ್ಧಿಕ ಪರಿಕರಗಳನ್ನು ಸಮರ್ಥವಾಗಿ ಬಳಸುತ್ತಿದ್ದಾರೆ ಎಂದೇ ಅರ್ಥ.

ವಿಮರ್ಶಕರು ಹಳೆಯ ರೀತಿಯ ಯಜಮಾನ ಪರಂಪರೆಯ ಧೋರಣೆಯಂತೆ

ಈ ಮಹಿಳೆಯರು ಯಾಕೆ ಬರೆಯುತ್ತಾರೆ. ಅಡುಗೆ ಮಾಡಿಕೊಂಡು ಇದ್ದರೆ ಸಾಕು ಅಂತ ಹೇಳ್ತಾ ಇಲ್ಲ. ತಿರುಮಲಾಂಬಾ ಅವರ ಬಗ್ಗೆ ಮಾಸ್ತಿಯವರು ಬರೆದಂತೆ ಈಗ ಯಾವ ವಿಮರ್ಶಕನೂ ಬರೆಯುವುದಿಲ್ಲ. ಆ ಧೋರಣೆಗಳು ಬದಲಾಗಿವೆ. ಈಗ ಯಾರು ಕೂಡಾ ಈ ಮಹಿಳೆಯರು ಜನಪ್ರಿಯ ಕಾದಂಬರಿ ಮಾತ್ರ ಬರೆಯುತ್ತಾರೆಂದು ಗಿರಡ್ಡಿ ಗೋವಿಂದರಾಜರಂತೆ ಮೂಗು ಮುರಿದುಕೊಂಡು ಕೇಳುವುದಿಲ್ಲ. ಇದು ಮೂಲತಃ ಸಾಮಾಜಿಕ ಮತ್ತು ಚಾರಿತ್ರಿಕ ಬದಲಾವಣೆಯನ್ನು ಸೂಚಿಸುತ್ತದೆ. ಈಗ ಮಹಿಳೆಯರನ್ನು ಶಿಕ್ಷಣವಂಚಿತರು ಎಂದು ಸಾರಾಸಗಟಾಗಿ ಕರೆಯುವಂತಿಲ್ಲ. ಸಾಂಪ್ರದಾಯಿಕ ಉತ್ಪಾದನೆಯ ಕ್ರಮ ಈಗ ಇಲ್ಲವಾಗಿದೆ. ಮಹಿಳೆಯರು ಅಡುಗೆ ಮಾಡಿಕೊಂಡು ಮಾತ್ರ ಬದುಕಬೇಕಾದ ಅವಶ್ಯಕತೆಯಿಲ್ಲ (ಕೆಳ ವರ್ಗದ ಸ್ತ್ರೀಯರು ಮನೆಯ ಹೊರಗಿನ ಕೆಲಸ ಮಾಡುತ್ತಿದ್ದರು). ಆಧುನಿಕ ಉತ್ಪಾದನೆಯ ಕ್ರಮದಲ್ಲಿ ಮಹಿಳೆಯರೂ ಮನೆಯಿಂದ ಹೊರಗೆ ಬಂದು ದುಡಿಯಬೇಕಾದ ಅವಶ್ಯಕತೆಯು ಸೃಷ್ಟಿಯಾಗಿದೆ. ಮಧ್ಯಮವರ್ಗದ ಕುಟುಂಬದ ಸ್ವರೂಪದಲ್ಲಿಯೂ ವ್ಯಾಪಕ ಬದಲಾವಣೆಯಾಗಿದೆ. ಕೂಡು ಕುಟುಂಬಗಳು ಗೈರು ಹಾಜರಿಯಾಗಿವೆ. ಕೌಟುಂಬಿಕ ಮೌಲ್ಯಗಳು ಕೂಡಾ ಬದಲಾಗಿವೆ. ಆಧುನಿಕ ಯುಗದಲ್ಲಿ ಬೇರೆ ಬೇರೆ ಕಸುಬುಗಳಲ್ಲಿ ಮಹಿಳೆಯರು ತೊಡಗಿಸಿಕೊಳ್ಳಬೇಕಾದ ಪ್ರಸಂಗ ಬಂದಿದೆ.

ಇದರಿಂದ ಬ್ಯಾಂಕುಗಳು; ಶೈಕ್ಷಣಿಕ ಸಂಸ್ಥೆಗಳು; ಲೋಕೋಪಯೋಗಿ ಇಲಾಖೆ; ತಾಲೂಕು ಆಫೀಸು – ಹೀಗೆ ಅಸಂಖ್ಯ ಉದ್ಯೋಗಗಳಲ್ಲಿ ಮಹಿಳೆಯರು ತೊಡಗಿಸಿಕೊಂಡಿದ್ದಾರೆ. ಆಧುನಿಕ ಚರಿತ್ರೆಯು ಸ್ತ್ರೀ – ಪುರುಷರಿಬ್ಬರ ಮೇಲೂ ಈ ರೀತಿಯ ಒತ್ತಡವನ್ನು ಹೇರಿದೆ. ಮನೆಯ ಹೊರಗೆ ದುಡಿಯಬೇಕಾದ ಅವಶ್ಯಕತೆಯೇನು ಎಂದು ಕೇಳುವವರು ಕಡಿಮೆ. ಕೇಳುವವರು ಇಲ್ಲವೆಂದಲ್ಲ. ಆದರೆ ಆ ರೀತಿಯಲ್ಲಿ ಯೋಚಿಸುವ ಪುರುಷರ ಸಂಖ್ಯೆ ಕಡಿಮೆಯಾಗಿದೆ. ಇದರಿಂದ ಮಹಿಳೆಯರ ದೇಹ ಮತ್ತು ಮನಸ್ಸಿನ ಮೇಲೆ ಬೇರೆ ಬೇರೆ ಒತ್ತಡಗಳು ಬೀಳತೊಡಗಿವೆ. ಮನೆಯ ಹೊರಗೆ ಕಛೇರಿಯ ಕೆಲಸ; ಮನೆಯ ಒಳಗೆ ಅಡುಗೆ ಕೆಲಸ; ಮಕ್ಕಳ ಲಾಲನೆ ಪಾಲನೆ – ಹೀಗೆ ಎರಡು ಮೂರು ಕ್ಷೇತ್ರಗಳಲ್ಲಿ ಹೆಂಗಸರು ದುಡಿಯುತ್ತಾರೆ ಮತ್ತು ಅದರ ಪರಿಣಾಮ ಅನುಭವಿಸುತ್ತಾರೆ.

ಈ ತರಹದ ಒತ್ತಡವನ್ನು ಒಂದು 'ದುರಂತ ನಾಟಕ'ವೆಂದು ಕರೆಯಬೇಕಾಗಿಲ್ಲ. ಪರಿಸ್ಥಿತಿಯು ಹಾಗಿದೆ. ಹಳೆಯ ಸಾಮಾಜಿಕ ಪರಿಸ್ಥಿತಿಯಲ್ಲಿ ಮನೆಯ ಜಗುಲಿಯಿಂದ; ಗಂಡನ ಕಣ್ಣುಗಳಿಂದ ಸಾಮಾಜಿಕ ಚಹರೆಗಳನ್ನು ಅರ್ಥಮಾಡಿಕೊಳ್ಳುತ್ತಿದ್ದ ಮಹಿಳೆಯರು ಈಗ ಪ್ರಭುತ್ವದ ಜೊತೆಗೆ ನೇರ ಮುಖಾಮುಖಿಯಾಗುತ್ತಿದ್ದಾರೆ. ಇದರಿಂದ ಅವರ ಅನುಭವಲೋಕವೂ ವಿಶಿಷ್ಟವಾಗಿದೆ. ಶಾಲೆಗೆ ಹೋಗದ ಪರಿಸ್ಥಿತಿಯು ಬೇರೆ – ಶಾಲೆಗೆ ಹೋಗಿ ಓದಿ ಬರೆದು – ಉದ್ಯೋಗ ಪಡೆದು ಬದುಕುವ ಪರಿಸ್ಥಿತಿಯು ಬೇರೆ. ಇಂಥ ಪರಿಸ್ಥಿತಿಯಿಂದಾಗಿ ಅನುಭವದ ನಿರೂಪಣೆಯನ್ನು ಭಾಷೆಯಲ್ಲಿ ಮಾಡುವಾಗ ಮಹಿಳೆಯರು

ಬೇರೆ ಬೇರೆ ಮಾದರಿಗಳನ್ನು ಆಯ್ಕೆಮಾಡಿಕೊಳ್ಳಬೇಕಾಗಿ ಬಂತು. ಈ ಮಾದರಿಗಳಲ್ಲಿ ಕವಿತೆಗಳಿವೆ; ಕಾದಂಬರಿಗಳಿವೆ; ನಾಟಕಗಳಿವೆ. ನವ ಸಾಮಾಜಿಕ ಪರಿಸ್ಥಿತಿಯು ಅವರನ್ನು ಬರೆಯುವಂತೆ ಪ್ರೇರಣೆಯನ್ನು ನೀಡಿದೆ. ಬರವಣಿಗೆಯು ಕೂಡಾ ಅವರ ಸಾಮಾಜಿಕ ಸಂಬಂಧದ ನಿರ್ವಹಣೆಯಲ್ಲಿ ಒಂದು ಪ್ರಮುಖ ವಿಧಾನ.

ನಾಗವೇಣಿಯವರ 'ಗಾಂಧಿ ಬಂದ' ಒಂದು ವಾಸ್ತವತಾವಾದಿ ಕಾದಂಬರಿಯೆಂದು ಕರೆದೆ. ಅದರಲ್ಲಿ ಪ್ರಭುತ್ವದ ಅಧಿಕಾರ ಕೇಂದ್ರವನ್ನು, ಅವರ ನಿಯಮಾವಳಿಗಳನ್ನು ನಿರ್ದಿಷ್ಟ ಅನುಭವಗಳ ಮೂಲಕ ಮಂಡಿಸಿದ ಕ್ರಮವು ಅನನ್ಯವಾಗಿದೆ. ಕನ್ನಡದಲ್ಲಿ ವಾಸ್ತವತಾವಾದಕ್ಕೆ ಒಂದು ಪರಂಪರೆಯಿದೆ: ಅದು ಬೋಳಾರ ಬಾಬುರಾಯರು; ಗುಲ್ವಾಡಿಯವರು ಮುಂತಾದವರಿಂದ ಮೊಳಕೆ ಹುಟ್ಟಿ ಕಾರಂತರ ಕಾದಂಬರಿಗಳ ಹೊತ್ತಿಗೆ ಹೆಮ್ಮರವಾಗಿ ಬೆಳೆದಿದೆ. ಅನೇಕ ಲೇಖಕರು ಅದರ ನೆರಳಿನಲ್ಲಿ ಆಶ್ರಯ ಪಡೆದರು. ಆದರೆ ಸ್ತ್ರೀಯರು ಈ ವಾಸ್ತವತೆಯ ಹಾದಿಯನ್ನು ಆಯ್ಕೆ ಮಾಡಿಕೊಂಡು ಬರೆಯುವ ಪ್ರಯತ್ನ ಮಾಡಿರಲಿಲ್ಲ. ಚಂಪಾವತಿ; ಸಾರಾ; ಎಚ್. ನಾಗವೇಣಿಯವರು ಈ ಹಾದಿಯನ್ನು ಆಯ್ಕೆ ಮಾಡಿಕೊಂಡರು. ಮತ್ತು ಅದೇ ಅಭಿವ್ಯಕ್ತಿಯ ಮಾರ್ಗದಲ್ಲಿ ಹೆಣ್ತನದ ಅನುಭವವನ್ನು ವಿಶಿಷ್ಟವಾಗಿ ಮಂಡಿಸಿದರು. ಈ ಮಂಡನೆಯ ಕ್ರಮದಲ್ಲಿಯೇ – ಮಂಡನೆಯ ಕ್ರಮ; ಮಂಡನೆಯಾದ ವಸ್ತು; ವಿಷಯಗಳು ಎಲ್ಲವೂ ವಸಾಹತೋತ್ತರ ಸಂದರ್ಭದ ಪ್ರಮುಖ ಸಂಗತಿಗಳನ್ನು ಒಳಗೊಂಡವು. ಮೀಯುವ ಆಟ ಕಥಾ ಸಂಕಲವೂ ಕೂಡಾ ಅಷ್ಟೆ: ವಿಶಿಷ್ಟ ಅನುಭವಗಳ – ವಿಶಿಷ್ಟ ಮಂಡನೆಗಳಾಗಿವೆ.

'ಹೆಂಗಸರ ಬುದ್ಧಿ ಮೊಣಕಾಲ ಕೆಳಗೆ' 'ಹೆಂಗಸರೆಂದರೆ ಚಂಚಲೆಯರು' 'ಹೆಂಗಸರಲ್ಲಿ ಗುಟ್ಟು ಬಿಡಬಾರದು' ಎನ್ನುವುದು ನಮ್ಮ ಸಾಂಪ್ರದಾಯಿಕ ಸಮಾಜದ ನಂಬಿಕೆಗಳು. ಅದಕ್ಕೆ ತದ್ವಿರುದ್ಧವಾಗಿ 'ಗಂಡಸೆಂದರೆ ದುಷ್ಟರು' 'ಅವರು ನಂಬಿಕೆಗೆ ಅರ್ಹರಲ್ಲ'ವೆಂದು ಹೇಳಿದರೆ ಅದೊಂದು ಸರಳ ದ್ವಂದ್ವವಿಟ್ಟ ಹಾಗೆ. ಈ ಥರದ ಸರಳ ದ್ವಂದ್ವದಿಂದ ಪಾರಾಗಿ ಮೂರನೆಯ ನೆಲೆಯನ್ನು ವಾಸ್ತವದ ದೃಷ್ಟಿಕೋನದಿಂದ ಮಂಡಿಸುವುದು ನಾಗವೇಣಿಯವರ ಕತೆಗಳಲ್ಲಿ ಎದ್ದು ಕಾಣಿಸುತ್ತದೆ. ಅಂದರೆ ಅತ್ಯಂತ ಸರಳ ದ್ವಂದ್ವದಿಂದ ಅವರ ಕತೆಗಳು ಪಾರಾಗಿವೆ. 'ಮೀಯುವ ಆಟ'ದ ಕತೆಗಳಲ್ಲಿ ಬರುವ ಗಂಡಸರಲ್ಲಿ ಮತ್ತು ಹೆಂಗಸರಲ್ಲಿ ಒಳ್ಳೆಯವರಿದ್ದಾರೆ. ಹಾಗೆಯೇ ಕೆಟ್ಟವರೂ ಇದ್ದಾರೆ. ಒಳ್ಳೆಯತನ ಮತ್ತು ಕೆಡುಕುತನ ಎನ್ನುವುದು ಆಯಾ ಸಂದರ್ಭದ ಹಿನ್ನೆಲೆಯಿಂದ ನಿರ್ವಚನಕ್ಕೆ ಗುರಿಯಾಗುವ ಪದಗಳಾಗಿವೆ.

ಭಾರತೀಯ ನಾಗರಿಕ ಸಮಾಜವು ಅದರ ರಾಜಕೀಯ ಉದ್ದೇಶಕ್ಕೆ ತಕ್ಕಂತೆ ಸ್ತ್ರೀತ್ವವನ್ನು ವ್ಯಾಖ್ಯಾನಿಸಿದೆ. ಹಾಗೆಯೇ ಬಂಡವಾಳವಾದಿ ವ್ಯಾಪಾರಿ ಧೋರಣೆಯು ಕೂಡಾ ಹೆಣ್ತನವನ್ನು ತನಗೆ ಬೇಕಾದಂತೆ ನಿರ್ವಚಿಸಿದೆ. ಎರಡೂ ನಿರ್ವಚನಗಳಿಗೂ ಮಿತಿಗಳಿವೆ. ಎರಡನೆಯದು ಹೆಣ್ತನವನ್ನು ಮಾರುಕಟ್ಟೆಗೆ ಬೇಕಾದಂತೆ ವ್ಯಾಖ್ಯಾನಿಸುತ್ತದೆ. ಮೊದಲನೆಯದಕ್ಕೆ ರಾಜಕೀಯ ಉದ್ದೇಶವು ಪ್ರಧಾನವಾಗಿದೆ. ಹೆಚ್ಚಿನ ಲೇಖಕಿಯರು

ಈ ಎರಡೂ ನಿಯಂತ್ರಣಗಳನ್ನು ತಮ್ಮ ಬರಹಗಳಲ್ಲಿ ಪ್ರಶ್ನಿಸಿದ್ದಾರೆ. ನಾಗವೇಣಿಯವರು ಕೂಡಾ 'ಮೀಯುವ ಆಟ'ದ ಕತೆಗಳ ಮುಖೇನ ಈ ಇರಾದೆಗಳನ್ನು ಪ್ರಶ್ನಿಸಿದ್ದಾರೆ. ದೊಡ್ಡ ಮಟ್ಟದ ರಾಜಕೀಯ ವ್ಯಾಖ್ಯೆಗಳಲ್ಲಿ ಹೆಣ್ಣು ರಾಜಕೀಯದ ಬಲಿ ಪಶು. ಮಾರುಕಟ್ಟೆಯಲ್ಲಿ ಹೆಣ್ಣೆಂದರೆ ಉಪಭೋಗದ ಸಾಮಗ್ರಿ. ಹೆಣ್ಣುತನವೆನ್ನುವುದಕ್ಕೆ ಬೇರೆ ಆಯಾಮಗಳೂ ಇವೆ. ಬೇರೆ ಮಾತಿನಲ್ಲಿ ಹೇಳಬೇಕೆಂದರೆ ನಾಗವೇಣಿಯವರ ಕತೆಗಳಲ್ಲಿ ಬೇರೆ ಬೇರೆ ರೀತಿಯ ಹೆಣ್ತನದ ನಿರ್ವಚನಗಳಿವೆ. ತಾಯಿಯಾಗಿರುವುದು ಬೇರೆ ; ಹೆಂಡತಿಯಾಗಿರುವುದು ಬೇರೆ; ಒಕ್ಕಲಗಿತ್ತಿಯಾಗಿರುವುದು ಬೇರೆ ಎಂಬ ಅರಿವು ನಾಗವೇಣಿಯವರಿಗಿದೆ. ಇದು ತುಂಬಾ ಪ್ರಮುಖವಾದ ಅರಿವು ಕೂಡಾ ಹೌದು. ಅಂದರೆ ಮಹಿಳೆಯ ಕುರಿತು ರಾಜಕೀಯ ಮತ್ತು ಮಾರುಕಟ್ಟೆಯ ವ್ಯಾಖ್ಯೆಗಿಂತ ಭಿನ್ನವಾದ ಬೇರೆ ಬೇರೆ ವ್ಯಾಖ್ಯೆಗಳು ಸಾಧ್ಯ. ನಾಗವೇಣಿಯವರು ಕತೆಗಳಲ್ಲಿ ಮಾಡುವುದು ಕೂಡಾ ಅದುವೇ. ಆದುದರಿಂದ ಅವರ ಕತೆಗಳಲ್ಲಿ ಅನೇಕ ಮುಖಗಳುಳ್ಳ ಮಹಿಳೆಯರ ಮತ್ತು ಹೆಣ್ತನದ ಪರಿಚಯವಾಗುತ್ತದೆ.

ವಸಾಹತು ಸಂದರ್ಭ ಮತ್ತು ವಸಾಹತೋತ್ತರ ಸಂದರ್ಭದಲ್ಲಿ ಸ್ತ್ರೀಯರ ಪ್ರಶ್ನೆಯು ಹೇಗಿದೆ ಎಂದು ನಾವು ಯೋಚಿಸಬೇಕು. ವಸಾಹತು ಸಂದರ್ಭದಲ್ಲಿ ಮಹಿಳೆಯರು ಎರಡು ರೀತಿಯ ವಸಾಹತು ಪ್ರಭುತ್ವದ ಪರಿಚಯಕ್ಕೆ ಗುರಿಯಾಗಬೇಕಾಯಿತು. ಒಂದು ಬ್ರಿಟೀಶ್ ಪ್ರಭುತ್ವ ಮತ್ತೊಂದು ಸ್ಥಳೀಯ – ಪುರುಷ ಕೇಂದ್ರಿತ ಪ್ರಭುತ್ವ. ಈ ಎರಡೂ ಪ್ರಭುತ್ವಗಳು ಮಹಿಳೆಯರ ದೃಷ್ಟಿಯಿಂದ ಕೇಡಿನವುಗಳು. ವಸಾಹತೋತ್ತರ ಸಂದರ್ಭದಲ್ಲಿ ಮಹಿಳಾ ಸಮಸ್ಯೆ ತುಂಬಾ ಸಂಕೀರ್ಣವಾಯಿತು. ಮಹಿಳಾ ಸಮಸ್ಯೆಗೆ – ಜಾಗತೀಕರ; ಕೋಮುವಾದ; ಜಾತಿ; ಮಾರುಕಟ್ಟೆ; ಪ್ರಾದೇಶಿಕತೆ; ಕುಟುಂಬ – ಎಲ್ಲವೂ ಮುಖ್ಯ ಕಾರಣಗಳು. ಮಹಿಳಾ ಅನನ್ಯತೆಯ ದೃಷ್ಟಿಯಿಂದ ಇವು ಪ್ರಮುಖ ಸಮಸ್ಯೆಗಳಾಗಿವೆ. ಅಂದರೆ ತಿರುಮಲಾಂಬಾ ಅವರಿಗಿದ್ದ ಸಮಸ್ಯೆಗೂ ನಾಗವೇಣಿಯವರು ಎದುರಿಸುವ ಸಮಸ್ಯೆಗೂ ಅಜಗಜಾಂತರ ವ್ಯತ್ಯಾಸವಿದೆ. ನಾಗವೇಣಿಯವರ ಕಥನ ಪ್ರಪಂಚ ವಸಾಹತು ಕಾಲ ಮತ್ತು ವಸಾಹತೋತ್ತರ ಕಾಲದ ಸಮಸ್ಯೆಗಳ ಬಗ್ಗೆ ಮಹಿಳಾವಾದಿ ಪ್ರತಿಕ್ರಿಯೆಗಳಾಗಿವೆ. ಈ ಪ್ರತಿಕ್ರಿಯೆಗಳು ವಸಾಹತು ಸಂದರ್ಭದಲ್ಲಿ ಆಗ ಬರೆಯುತ್ತಿದ್ದ ಲೇಖಕಿಯರಿಗಿಂತ ಭಿನ್ನ. ನಾಗವೇಣಿಯವರ 'ಗಾಂಧಿ ಬಂದ' ಕಾದಂಬರಿಯಲ್ಲಿ ಬರುವ ಚಿತ್ರಗಳು ವಸಾಹತು ಕಾಲದ ಪ್ರತಿಕ್ರಿಯೆಗಳು. ಈ ಸಂಕಲನದ 'ಒಡವೆ' ಕತೆಯನ್ನು ಈ ಹಿನ್ನೆಲೆಯಿಂದ ಗಮನಿಸಬಹುದು. ಈ ಕಥಾ ಸಂಕಲನದಲ್ಲಿ ಬರುವ 'ಧಣಿಗಳ ಬೆಳ್ಳಿ ಲೋಟ' ಒಂದರ್ಥದಲ್ಲಿ ದ್ವಿವಸಾಹತುಶಾಹಿ ಧೋರಣೆಯ ಬಗೆಗಿನ ಪ್ರತಿಕ್ರಿಯೆಯಾಗಿದೆ. ಉದಾಹರಣೆಗೆ 'ಮೀಯುವ ಆಟ' 'ತಾಯ್ತನ' ದಂಥ ಕತೆಗಳು ವಸಾಹತೋತ್ತರ ಸಂದರ್ಭದ ಪ್ರಮುಖ ಸ್ತ್ರೀವಾದಿ ಪ್ರತಿಕ್ರಿಯೆಗಳಾಗಿವೆ.

ಇನ್ನೊಂದು ಅಂಶವನ್ನು ಗಮನಿಸಬಹುದು. ಮೂರನೆಯ ಜಗತ್ತಿನ ಸ್ತ್ರೀಯರ

ಸ್ವ ಅನನ್ಯತೆಯ ಮಾದರಿಗಳು ಬೇರೆ ಬೇರೆ ಸಮಸ್ಯೆಗಳನ್ನು ಒಳಗೊಂಡಿವೆ. ಅನಕ್ಷರತೆ; ಬಡತನ; ದೇಹ ವ್ಯಾಪಾರ; ಪ್ರಾದೇಶಿಕ ಸಮಸ್ಯೆ; ದೇಹಕ್ಕೆ ಸಂಬಂಧಿಸಿದ ಸಮಸ್ಯೆಗಳು; ಕೋಮುವಾದಿ – ಇತ್ಯಾದಿ. ಇವುಗಳು ಪ್ರತ್ಯಕ್ಷವಾಗಿ ಮತ್ತೆ ಕೆಲವೊಮ್ಮೆ ಪರೋಕ್ಷವಾಗಿ ಪ್ರಭಾವ ಬೀರಿವೆ. ನಾಗವೇಣಿಯವರ ಕಥನ ಪ್ರಪಂಚದ ಮೂಲ ನೆಲೆಗಳು ಇವು. ಆದುದರಿಂದ ನಾಗವೇಣಿಯವರ ಕತೆಗಳ ಬಹಿರ್ಮುಖತೆಯು ಏಕ ಕಾಲಕ್ಕೆ ಸಾಮಾಜಿಕ ಹಾಗೂ ವಸಾಹತೋತ್ತರ ಸಂದರ್ಭಕ್ಕೆ ಬಂದ ಪ್ರತಿಕ್ರಿಯೆಗಳಾಗಿವೆ. ಧಣಿಗಳ 'ಬೆಳ್ಳಿ ಲೋಟ'ದ ಚಿನ್ನಮ್ಮ; 'ಸೇವಂತಿ ಓಲೆ' ಯ ಸೇವಂತಿ; 'ತಾಯ್ತನ' ಕತೆಗಳನ್ನು ಈ ಹಿನ್ನೆಲೆಯಲ್ಲಿ ಗ್ರಹಿಸಿದಾಗ ಅರ್ಥಪೂರ್ಣವೆನಿಸುತ್ತದೆ.

ನಾಗವೇಣಿಯವರು ವಿವರಿಸುವ ಸಮಾಜ ಒಂದು ವಿಧಾನದಲ್ಲಿ ಹಾಜರಾಗಿದೆ. ಅದನ್ನು "ಪಠ್ಯದಲ್ಲಿ ಹಾಜರಾದ ಸಮಾಜ"ವೆಂದು ನಾವು ಕರೆಯಬಹುದು. ಆದರೆ ಮಾನವ ಜಗತ್ತಿನಲ್ಲಿ ಸಮಾಜಕ್ಕೆ ಬೇರೆ ಮುಖಗಳೂ ಇರಬಹುದು. ಅದಕ್ಕೆ ದೊಡ್ಡ ಚರಿತ್ರೆಯೂ ಇದೆ. ಹಾಗೆ ನೋಡುವುದಿದ್ದರೆ ಸಮಾಜವೆನ್ನುವುದು ಲೇಖಕರಿಗೆ ಅವರವರ ಆಯ್ಕೆಗೆ ಸಂಬಂಧಿಸಿಕೊಂಡು ರೂಪುಗೊಳ್ಳುತ್ತದೆ. ಸಮಾಜವೂ ಆಯ್ಕೆಯ ಪ್ರಕ್ರಿಯೆಗೆ ಗುರಿಯಾಗುತ್ತದೆ. "ಆಯ್ಕೆ"ಯು ನಾಗವೇಣಿಯವರಿಗೆ ತೀರಾ ವೈಯಕ್ತಿಕವಲ್ಲ. ಅದಕ್ಕೆ ಬಹಿರ್ಮುಖತೆಯಿದೆ. ಗಂಡು ಹೆಣ್ಣಿನ ಸಂಬಂಧ ಪಠ್ಯದ ಹೊರಗೆ ಬೇರೆ ಬೇರೆ ರೀತಿಯಿರಬಹುದು. ಕತೆಗಾರ್ತಿಯಾಗಿ ನಾಗವೇಣಿಯವರು ಅದನ್ನು ನಿರ್ದಿಷ್ಟ ಸಂಯೋಜನೆಗೆ ಗುರಿಪಡಿಸಿದ್ದಾರೆ. ಅದು ಗಮನಾರ್ಹ ಕೂಡಾ. ಅವರ ಕೆಲವು ಕತೆಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸಮಾಜವಿದೆ. ಆದರೆ ಅವರ ಕತೆಗಳ ಆಚೆಗೂ ದ.ಕ. ಜಿಲ್ಲೆಯಿದೆ. ದ.ಕ. ಜಿಲ್ಲೆ ವಸಾಹತೋತ್ತರ ಸಂದರ್ಭದಲ್ಲಿ ಬದಲಾಗುತ್ತಲೇ ಬಂದಿದೆ. ಇದು ಎಲ್ಲಾ ಜಿಲ್ಲೆಯ ಎಲ್ಲಾ ಊರುಗಳ ಕತೆಯೂ ಹೌದು. ನಾಗವೇಣಿಯವರ ಕತೆಗಳು ಬದಲಾಗುತ್ತಿರುವ ದಕ್ಷಿಣ ಕನ್ನಡ ಜಿಲ್ಲೆಯ ವಸಾಹತೋತ್ತರ ಕಾಲದ ಸಮಸ್ಯೆಯ ಕುರಿತು ಹೇಳುತ್ತವೆ. ಇದನ್ನು ಇನ್ನೊಂದು ದಿಕ್ಕಿನಿಂದ ನೋಡಿದರೆ ಇವೆಲ್ಲವೂ ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ ಚರಿತ್ರೆಯ ನಿರೂಪಣೆಗಳಾಗಿವೆ. ಬದಲಾಗುತ್ತಿರುವ ಸಮಾಜ, ಅಲ್ಲಿನ ಸಂಬಂಧಗಳು ನಾಗವೇಣಿಯವರಿಗೆ ಮುಖ್ಯ. ಈ ಸಂಕಲನದ 'ಸಿರಿ ತೋರಿದ ದಾರಿ' ಕತೆಯೊಂದನ್ನು ಹೊರತುಪಡಿಸಿದರೆ ಮತ್ತು ಕೊನೆಯ ಕತೆಯಾದ 'ಜೀವ ಸೆಲೆ'ಯನ್ನು ಬಿಟ್ಟರೆ ಉಳಿದೆಲ್ಲಾ ಕತೆಗಳಿಗೂ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾದೇಶಿಕ ಕೇಂದ್ರಗಳು ಮುಖ್ಯ. ಕತೆಯಿಂದ ಹೊರಗಿನ ಸಂಗತಿಗಳಲ್ಲಿ ಅನೇಕ ಪಲ್ಲಟಗಳಾಗಿವೆ. ದಕ್ಷಿಣ ಕನ್ನಡದಲ್ಲಿ ಶಾಲೆ–ಕಾಲೇಜುಗಳು ಬಂದಿವೆ. ಭೂ ಮಸೂದೆ ಜಾರಿಗೆ ಬಂದಿದೆ. ಬೀಡಿ ಉದ್ಯಮ ಅನೇಕ ಸಾಮಾನ್ಯ ಹೆಣ್ಣುಮಕ್ಕಳ ಹೊಟ್ಟೆಯನ್ನು ತುಂಬಿಸಿವೆ. ಹೇರಳವಾಗಿ ಅಡಿತೆಯ ತೋಟ ಎದ್ದಿದೆ. ಗದ್ದೆಗಳು ಸುಖವಿಲ್ಲದಿದ್ದರೂ ಅನೇಕರ ಹೊಟ್ಟೆ ತುಂಬಿಸಿವೆ. ಏಕೈಕ ಜಾತಿಯ ಯಜಮಾನಿಕೆಯು ಗೈರು ಹಾಜರಿಯಾಗಿದೆ. ಹಿಂದೂ–ಮುಸ್ಲಿಂರ

ನಡುವೆ ಬಾಂಧವ್ಯವಿದೆ. ತಿಳುವಳಿಕೆಯ ಪ್ರಮಾಣವು ಹೆಚ್ಚಿದೆ. ಇದೆಲ್ಲವೂ ನಾಗವೇಣಿಯವರ ಕತೆಗಳಲ್ಲಿ ಉಕ್ತವಾಗಿದೆಯೆಂದು ಅರ್ಥವಲ್ಲ. ಅದರ ಪರಿಚಯ ಇಲ್ಲಿನ ಕತೆಗಳಲ್ಲಿವೆ. ಅವರು ನಿರೂಪಿಸುವ ಲೈಂಗಿಕ ರಾಜಕಾರಣದ ಮುಖಗಳು ವಾಸ್ತವಕ್ಕೆ ಹತ್ತಿರವಿದೆ. ಅದನ್ನು ಮರೆಯಬಾರದು. ಅವರ ಕತೆಗಳಲ್ಲಿ ಲೈಂಗಿಕ ರಾಜಕಾರಣದ ಮುಖಗಳು ಬೇರೆ ಬೇರೆ.

'ಸಿರಿಯ ತೋರಿದ'ದಾರಿ ಯಲ್ಲಿ ಜಾನಪದ ಕತೆಯ ಆವರಣವಿದೆ. ಇದು ತುಳು ನಾಡಿನ ಶಿಷ್ಟ ಕತೆಯಲ್ಲ. ತುಳುನಾಡಿನ ಜಾನಪದ ಕತೆಯ ಹಿನ್ನೆಲೆಯಲ್ಲಿರುವ ಲಿಂಗ ರಾಜಕಾರಣವನ್ನು ಈ ಕತೆಯು ಪ್ರತಿನಿಧಿಸುವಾಗ ಅದಕ್ಕೆ ಸಾರ್ವತ್ರಿಕತೆಯೂ ಇದೆ. 'ತನ್ನ ಸತ್ಯಲೋಕದ ಮಗಳು ಸಿರಿ ಬೆಂಕಿಯಂತೆ. ಲೋಕದ ಎಲ್ಲ ಹೆಣ್ಣು ಮಕ್ಕಳ ನೋವು – ಸಂಕಟದ ಅರಿವು ಆಕೆಗೆ ಇದೆಯೆನ್ನುವುದು ಅವಳ ಮಾತಿನಲ್ಲಿ ಸ್ಪಷ್ಟ. ಬೆಂಕಿಯಂಥ ಆ ಮಗಳನ್ನು ಸರಿಯಾಗಿ ಬಳಸಿಕೊಂಡರೆ ಆಕೆ ಬೆಳಕು ನೀಡಿಯಾಳು. ... ತಪ್ಪಿದೆಯಾ ಸುಟ್ಟು ಭಸ್ಮ ಮಾಡಿಯಾಳು ... ಇರಲಿ ಸಾಕು ಅಬಲ ಹೆಣ್ಣು ಮಕ್ಕಳಿಗೆ ಆಕೆಯಿಂದ ಒಳ್ಳೆಯದಾಗುವುದಾದರೆ ... " ಕತೆಯಲ್ಲಿರುವ ವಿಶ್ವಾತ್ಮಕತೆಗೆ ಇದೊಂದು ಉದಾಹರಣೆ ಮಾತ್ರ. ಸ್ಥಳೀಯ ಚೌಕಟ್ಟಿನಲ್ಲಿದ್ದೂ ಅದಕ್ಕೆ ವಿಶ್ವಾತ್ಮಕ ಅರ್ಥವಲಯವನ್ನು ತಂದುಕೊಡುವುದರ ಮೂಲಕ ನಾಗವೇಣಿಯುವರು ಲೈಂಗಿಕ ರಾಜಕಾರಣದ ರೂಪವನ್ನು ಅನಾವರಣಗೊಳಿಸುತ್ತಾರೆ. 'ಸಿರಿಯು ತೋರಿದ ದಾರಿ' ಕತೆಯು ಹುಟ್ಟಿರುವುದು ಜಮೀನುದಾರಿ ಪದ್ಧತಿಯ ಸಾಮಾಜಿಕ ಸಂದರ್ಭದಲ್ಲಿ. ಈ ಜಮೀನುದಾರಿ ಪದ್ಧತಿಯ ಸಮಾಜವೆಂದರೆ ಅದು ಇಡಿಯ ಕರ್ನಾಟಕಕ್ಕೆ ಒಂದೇ ಅರ್ಥವನ್ನು ಕೊಡುತ್ತದೆಯೆಂದು ಹೇಳಲು ಬರುವುದಿಲ್ಲ. 'ಸಿರಿಯು ತೋರಿದ ದಾರಿ' ಕತೆಯ ಸಂದರ್ಭವಿರುವುದು ಊಳಿಗಮಾನ್ಯ ಪದ್ಧತಿಯ ಅರ್ಥಶಾಸ್ತ್ರದಲ್ಲಿ. ಆದರೂ ನಾಗವೇಣಿಯವರು ಸಿರಿಯನ್ನು ಕತೆಯ ಕೇಂದ್ರವಾಗಿರಿಸಿಕೊಂಡು ಅದಕ್ಕೆ ವಿಭಿನ್ನ ಹಾದಿಯನ್ನು ತೋರಿಸುತ್ತಾರೆ. 'ಸಖೀಗೀತೆ' ಕತೆಯ ಸನ್ನಿವೇಶ ಬೇರೆ ಬಗೆಯದು. ಈ ಕತೆಯನ್ನು ಓದಿದ ತಕ್ಷಣ – ಇದು ರೊಮಾಂಟಿಕ್ ಆಗಿದೆಯೆಂದು ಅನಿಸುತ್ತದೆ. ಸಿರಿದೇವಿಗೆ ಗಂಡ – ಗಟ್ಟದ ಮಾಸ್ತ ಮಾದೇಗೌಡ ಕತೆಯನ್ನು ಹೇಳುತ್ತಾನೆ. ಈ ಕತೆಯಲ್ಲಿ ಎರಡು ಕತೆಗಳು ಒಂದಕ್ಕೊಂದು ಸೇರಿಕೊಂಡಿವೆ. ಒಂದು ಕಡೆಯಿಂದ ಕವಿ ದಂಪತಿಗಳದು. ಮತ್ತೊಂದು ಕಡೆಯಿಂದ ಸಿರಿದೇವಿ ಮತ್ತು ಅವಳ ಗಂಡನದು. ಕವಿ ಪತ್ನಿಗೆ ಒಮ್ಮೆಯೂ ಉಡುಪಿಯನ್ನು ನೋಡಲಾಗುವುದಿಲ್ಲ. ಕವಿ ಪತ್ನಿಯ ಬಗ್ಗೆ ನಾಗವೇಣಿಯವರದು ಉದಾರವಾದ ದೃಷ್ಟಿಕೋನ. ಆ ಪಾತ್ರವನ್ನು ಲೇಖಕಿ ಕರುಣಾರ್ದ್ರವಾಗಿಯೇ ಚಿತ್ರಿಸುತ್ತಾರೆ. ತನ್ಮೂಲಕ ಕತೆಯೊಳಗೆ ಒಂದು ನಾಟಕೀಯತೆಯೂ ಸಾಧ್ಯವಾಗಿದೆ. ಸಿರಿದೇವಿ ಮತ್ತು ಆಕೆಯ ಗಂಡ; ಕವಿ ಮತ್ತು ಕವಿಯ ಹೆಂಡತಿ – ದ್ವಂದ್ವ ರೇಖೆಗಳಂತೆ ಈ ಕತೆಯಲ್ಲಿ ಚಿತ್ರಣಗೊಂಡಿದ್ದರೂ ಅಂತಿಮವಾಗಿ ನಾಗವೇಣಿಯವರಿಗೆ ಮುಖ್ಯವಾಗುವುದು –

ಆಸೆಯಲ್ಲಿ ಮಣ್ಣಾದ ಕವಿ ಪತ್ನಿ.

ಲೈಂಗಿಕ ವ್ಯತ್ಯಾಸವೆನ್ನುವುದು ಬರಿಯ ಹೊಟ್ಟೆಯ ಮತ್ತು ಬಟ್ಟೆಯ ಪ್ರಶ್ನೆಯಲ್ಲ. ಅದು ಮನಸ್ಸಿಗೆ ಸಂಬಂಧಿಸಿದ್ದು. ಅದು ಪ್ರಜ್ಞೆಗೆ ಸಂಬಂಧಿಸಿದ್ದು ಮತ್ತು ಸ್ತ್ರೀತ್ವವನ್ನು ಹೊಂದಿರುವುದೆಂದರೆ ಅದು ದೌರ್ಬಲ್ಯವಾಗಿರಬೇಕಾಗಿಲ್ಲ. ಸ್ತ್ರೀತ್ವಕ್ಕೆ ಸಖೀಭಾವವಿದೆ. ಅದಕ್ಕೆ ತಾಯ್ತನದ ಸಂಭ್ರಮವಿದೆ. ಅದಕ್ಕೆ ಯಜಮಾನಿಕೆಯ ಸೊಕ್ಕೂ ಇದೆ. ಅದನ್ನು ಅಂದರೆ ಸ್ತ್ರೀತ್ವವನ್ನು ಯಾವ ರೀತಿಯಲ್ಲಿ ಪಾಪವೆಂದು ತಿಳಿದುಕೊಳ್ಳದ ಮತ್ತು ಅದನ್ನು ಹೆಮ್ಮೆಯಾಗಿ ನೋಡುವ ಕ್ರಮವೂ ನಾಗವೇಣಿಯವರಲ್ಲಿದೆ. 'ದಾನ' ಕತೆಯಲ್ಲಿ ಬರುವ 'ತಾಯ್ತನ' 'ತಾಯ್ತನ' ಕತೆಯಲ್ಲಿ ಬರುವ 'ತಾಯ್ತನ'ಕ್ಕೆ ವ್ಯತ್ಯಾಸವಿದೆ. ಬಾಣಂತನವೆನ್ನುವುದು ಸಂಭ್ರಮವಾಗಲೂ ಸಾಧ್ಯ.

"ಒಟ್ಟಾರೆ ಗುತ್ತಿನ ಒಡತಿ ಸೀತಕ್ಕೆಯವರು ನೇರ ತಾನೇ ನಿಂತು ಮಾಡುವ ಬಾಣಂತನವೆಂದರೆ ಅದು ನಿಜಕ್ಕೂ ಒಂದು ಸಾಂಪ್ರದಾಯಿಕ ಬಾಣಂತನವೆ. ಅದರಲ್ಲೊಂದು ಅಬ್ಬರದ ಕಳೆ ಇದ್ದೇ ಇದೆ. ಅಂದ ಹಾಗೆ ಗುತ್ತಿನ ಮನೆಯ ಬಾಣಂತನದ ವೈಭವ – ಅಬ್ಬರ ಊರವರಿಗೆ ತಿಳಿಯುವುದೇ ದಿನಾ ಅಲ್ಲಿಂದ ಬೀಸಿ ಬರುವ ತುಪ್ಪದಲ್ಲಿ ಬೇಯುವ ಲೇಹ್ಯ, ಸಂಬಾರಗಳ ಪರಿಮಳದಿಂದ; ಕಪಾಯ ಮದ್ದುಗಳ ಕಮಟನಿಂದ. ಅದರಲ್ಲೂ ತುಪ್ಪದಲ್ಲಿ ಹುರಿವ ಮೆಂತೆ – ಬೆಳ್ಳುಳ್ಳಿಗಳ ಪರಿಮಳಕ್ಕೆ ಬರೀ ಊರಿನ ಹೆಂಗಸರ್ಯಾಕೆ, ಗಂಡಸರೂ ಕೂಡಾ ಬಾಣಂತನದ ಸುಖವನ್ನೊಮ್ಮೆ ಅನುಭವಿಸಲು ಹಾತೊರೆಯಬೇಕು! ಅಂಥಾ ಹಿತವಾದ ಪರಿಮಳ ಆ ಬಾಣಂತಿ ಲೇಹ್ಯ – ಪರಿಕರಗಳದ್ದು" (ದಾನ, ಪು. ೩೫). ತಾಯ್ತನಕ್ಕೆ ಸಾಂಸ್ಥಿಕ ನೆಲೆಯಿದೆ. ಅದಕ್ಕೆ ದೇಹ ಸಂಬಂಧಿತವಾದ ಅನುಭವಗಳಿವೆ. ತಾಯ್ತನದ ಮನಸ್ಸು ಮತ್ತು ಸಮಾಜಕ್ಕೆ ಅವಿನಾಭಾವ ಸಂಬಂಧವೂ ಇದೆ. ತಾಯ್ತನದ ನಿರಾಕರಣೆಯು ನಾಗವೇಣಿಯವರ ಆಸಕ್ತಿಯಲ್ಲ. ಅದನ್ನು ಅವರು ನಿರಾಕರಿಸುವುದಿಲ್ಲ. ಅದನ್ನು ಧನಾತ್ಮಕವಾಗಿ ನೋಡುತ್ತಾರೆ. ಮಹಿಳಾವಾದಿಗಳಲ್ಲಿ ಕೆಲವರು ತಾಯ್ತನವನ್ನು ನಿರಾಕರಿಸುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ವಸಾಹತೋತ್ತರ ಸಂದರ್ಭದಲ್ಲಿ ಎರಡು ರೀತಿಯ ಸಂಕಥನದ ಮಾದರಿಗಳನ್ನು ಕೂಡಾ ಇಲ್ಲಿ ಗಮನಿಸಬೇಕು. ಒಂದು ಮಾರ್ಗ – ಮಹಿಳೆಯರನ್ನು ಒಂದು ಪ್ರತ್ಯೇಕ; ವ್ಯಕ್ತಿವಾದಿ ಘಟಕವಾಗಿ ನೋಡಿದ ಕ್ರಮ. ಇದರಲ್ಲಿ ಹೆಣ್ಣಿನ ಅಸ್ತಿತ್ವವು ವ್ಯಕ್ತಿ ಕೇಂದ್ರಿತವಾಗಿರುತ್ತದೆ. ಸ್ವಯಂ ಕೇಂದ್ರಿತ ಮೌಲ್ಯಗಳು ಮುಖ್ಯವಾಗಿರುತ್ತವೆ. ವ್ಯಕ್ತಿಯಾಗಿ ಹೆಣ್ಣಿಗೆ ಒಂದು ಪ್ರತ್ಯೇಕ ಅಸ್ತಿತ್ವವಿದೆ. ಸ್ವಾತಂತ್ರ್ಯವೂ ವ್ಯಕ್ತಿಕೇಂದ್ರಿತವಾಗಿರಬೇಕೆಂಬುದು ಈ ಮಾದರಿಯ ಚಿಂತನೆಯಲ್ಲಿ ಹೆಚ್ಚು ಮುಖ್ಯ. ವೀಣಾ ಶಾಂತೇಶ್ವರ; ವೈದೇಹಿ ಮೊದಲಾದವರ ಕತೆಗಳನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು. ಮತ್ತೊಂದು ಮಾರ್ಗವು ಪ್ರಾದೇಶಿಕ ಮತ್ತು ಸಾಮಾಜಿಕ ಕಥನದ ಮಾರ್ಗ. ಸಾರಾಅಬೂಬಕರ್ ಬಾನು ಮಷ್ತಾಕ್ ಮುಂತಾದವರು ಈ

ಮಾರ್ಗದಲ್ಲಿ ಹೆಚ್ಚು ಪ್ರಸಿದ್ಧರಾಗಿದ್ದಾರೆ. ನಾಗವೇಣಿಯವರದು ಕೂಡಾ ಸ್ಥಳೀಯ ಮಾರ್ಗ. ಇದನ್ನು ಪ್ರಾದೇಶಿಕ ಕಥನದ ಮಾರ್ಗವೆಂದು ಕರೆಯಬಹುದು. ತುಂಬಾ ಪ್ರಜ್ಞಾಪೂರ್ವಕವಾಗಿ ವಸಾಹತು ಕಾಲ ಮತ್ತು ವಸಾಹತೋತ್ತರ ಕಾಲದ ಯಜಮಾನಿಕೆಯ ನಿರೂಪಣೆಗಳನ್ನು ನಾಗವೇಣಿಯವರು ನಿರಾಕರಿಸುತ್ತೆಂದು ಅನಿಸುವುದಿಲ್ಲ. ಆದರೆ ನಾಗವೇಣಿಯವರ ಕಥನ ಕ್ರಮವು ಪ್ರಾದೇಶಿಕವಾಗಿರುವುದು ಅವರ ಮಟ್ಟಿಗೆ ಸಹಜವಾಗಿದೆ. ಅದು ಕೃತಕವಾದುದಲ್ಲ ಮತ್ತು ಉದ್ದೇಶಪೂರ್ವಕವಾದುದೂ ಅಲ್ಲ. 'ಕಾಲ'ದ ಬಗ್ಗೆ ಬರೆಯುವಾಗ ನಾಗವೇಣಿಯವರು ಆಶ್ರಯಿಸುವುದು ತುಳುನಾಡಿನ ಕಾಲದ ಗ್ರಹಿಕೆಯ ಹಿನ್ನೆಲೆಯಲ್ಲಿ. ಇಡೀ ಸಂಕಲನದಲ್ಲಿ ಈ ತರಹದ ಹೇರಳ ವಾಕ್ಯಗಳು ಸಿಗುತ್ತವೆ. "ಮಳೆಯ ಜಟಿ ಜಟಿರಾಗ ಶುರುವಾಗಿ ಆಗಲೇ ಮೂರು ದಿನ ಕಳೆದಿವೆ. ಕಾರ್ತೆಲ್ ತಿಂಗಳ ನಡುವದು" (ಪು. ೧). 'ಮೊನ್ನೆಯ ಭೇಷೆ ತಿಂಗಳ ಶುರುವಿರಬೇಕು' (ಪು. ೫), ಪೆಗ್ಗು ಭೇಷೆ ತಿಂಗಳು ಬಂತೆಂದರೆ ಸಾಕು – ದಲ್ಲಾಳಿ ಕೆಲಸದ ಜೊತೆಗೆ ಮುಂದೆ ದಿಗಿಣ ತೆಗೆದು ಬರಲಿರುವ ಕಾರ್ತೆಲ್ ತಿಂಗಳು (ಪು. ೯) – ಇವು ಉದಾಹರಣೆಗಳು. ಹಾಗೆಯೇ ಈ ಕಥಾ ಸಂಕಲನದಲ್ಲಿ ಬರುವ ಪ್ರಾದೇಶಿಕ ಆಚರಣೆಗಳು (ಅಜಲಿನ ಕೊರತಿಗೆ ಮಗು ದಾನ ಮಾಡುವುದು) (ಪು. ೩೬) ಮುಂತಾದವು ಪ್ರಾದೇಶಿಕ ಕಥನದ ಹಾದಿಯನ್ನು ಸೂಚಿಸುತ್ತವೆ. ಇದನ್ನೆಲ್ಲಾ ಬರೆಯುವಾಗ ನಾಗವೇಣಿಯರಿಗೆ ರಾಜಕೀಯ ಸ್ವಾತಂತ್ರ್ಯವಿದೆ. ಬರವಣಿಗೆಯ ಸ್ವಾತಂತ್ರ್ಯವಿದೆ. ಅವರು ವಸಾಹತೋತ್ತರ ಸಂದರ್ಭದಲ್ಲಿ ಬರೆಯುತ್ತಿದ್ದಾರೆ. ಆದರೆ ಅವರ ಕತೆಗಳನ್ನು ಓದಿದಾಗ ಅನಿಸುತ್ತದೆ. ವಸಾಹತೋತ್ತರ ಸಂದರ್ಭದ ಅನುಭವಗಳು ಎಲ್ಲರಿಗೂ ಒಂದೇ ಅಲ್ಲ ಮತ್ತು ವಸಾಹತೋತ್ತರ ಅನುಭವವು ಪ್ರಾದೇಶಿಕವಾಗಿಯೂ ಭಿನ್ನಭಿನ್ನವಾಗುತ್ತವೆ. ಈ ತರಹದ ಪ್ರಾದೇಶಿಕ ಆವರಣವನ್ನು ತೆಗೆದು ಹಾಕಿದರೆ – ಅಂತಿಮವಾಗಿ ಹೇಳುವುದು (ಮುಯುವ ಆಟದ ಕತೆಗಳು) ವಿಶ್ವಾತ್ಮಕತೆಯನ್ನು ಮನುಕುಲದ ಹಾಡುಪಾಡುಗಳನ್ನು. ನಾಗವೇಣಿಯವರ ಕತೆಗಳು – ಬದಲಾಗುತ್ತಿರುವ ಸನ್ನಿವೇಶ ಮತ್ತು ಸ್ಥಳಗಳಲ್ಲಿ ಮನುಷ್ಯರ ಸ್ಥಾನಮಾನವೇನು ಎಂಬುದನ್ನೇ ಹುಡುಕುತ್ತವೆ. ಹಾಗಾಗಿ ಈ ಕತೆಗಳು ಸಾಂಸ್ಕೃತಿಕ; ಸಾಮಾಜಿಕ ಮತ್ತು ರಾಜಕೀಯವಾದ ಏಕಕೇಂದ್ರಿತ ಚಿಂತನೆಗಳ ವಿರುದ್ಧ ಬಂದ ಕತೆಗಳಾಗಿವೆ. ಮತ್ತು ಕತೆಗಳಿಗೆ ಬಹು ಕೇಂದ್ರಗಳಿವೆ. ಅದು ಬರಿಯ ತರ್ಕ ಶಾಸ್ತ್ರದ ಮಂಡನೆಗಳಂತೆ ಅನಿಸುವುದಿಲ್ಲ.

ವಸಾಹತೋತ್ತರ ಪಠ್ಯಗಳಲ್ಲಿ ನಾಲ್ಕು ಮಾದರಿಗಳಿವೆಯೆನ್ನುವುದು ಕೂಡಾ ಗಮನಾರ್ಹ. ಈ ವರ್ಗೀಕರಣವು ಈಗಾಗಲೇ ವಿಧಿತವಾಗಿರುವಂಥದ್ದು:

೧. ರಾಷ್ಟ್ರೀಯ ಮತ್ತು ಪ್ರಾದೇಶಿಕ ಮಾದರಿಗಳು – ಸಾರಾ ಅವರ ಕತೆಗಳು; ನಾಗವೇಣಿ.

೨. ಜನಾಂಗ ಕೇಂದ್ರಿತ ಮಾದರಿಗಳು – ಸಾರಾ ಮತ್ತು ಬಾನು

೩. ತೌಲನಿಕ ಮಾದರಿಗಳು – ಮತ್ತು ಸಂಕೀರ್ಣ ರೂಪದವು – ವೀಣಾ ಶಾಂತೇಶ್ವರ.

೪. ಮಿಶ್ರ ರೂಪಿಯಾದವು – ವೈದೇಹಿ.

ಈ ಮಾದರಿಗಳನ್ನು ಈಗಾಗಲೇ ವಿದ್ವಾಂಸರು ಗುರುತಿಸಿದ್ದಾರೆ. ಇದರಲ್ಲಿ ಪ್ರಾದೇಶಿಕತೆಯು ನಾಗವೇಣಿಯವರಲ್ಲಿ ಹೆಚ್ಚು ಕಾಣಿಸುತ್ತದೆ. ಪ್ರಾದೇಶಿಕತೆಯ ಬಗ್ಗೆ ಬರೆಯುವುದೆಂದರೆ ರಾಷ್ಟ್ರೀಯವಾದಿ ನಿರೂಪಣೆ; ಜಾಗತಿಕ ನಿರೂಪಣೆ ಮತ್ತು ವ್ಯಕ್ತಿವಾದಿ ನಿರೂಪಣೆಗಿಂತ ಬೇರೆಯಾದುದು. ಈ ಮಾದರಿಯಲ್ಲಿ ಅನೇಕ ವಿಷಯಗಳು ಮುಖ್ಯವಾಗುತ್ತವೆ. ವ್ಯಕ್ತಿ; ಕುಟುಂಬ; ಪರಿಸರ; ಜಾತಿ; ಲಿಂಗ ಮುಂತಾದವು ಈ ಮಾದರಿಯ ಕತೆಗಳಲ್ಲಿ ಮುಖ್ಯ. ನಾಗವೇಣಿಯವರ ಕತೆಗಳ ಪ್ರಮುಖ ಪ್ರಶ್ನೆಯೆಂದರೆ ಇದುವೆ. ಹಾಗಾಗಿ ಒಂದೆಡೆಯಿಂದ ಅದು ಗ್ರಾಮೀಣ ಪರಿಸರದ ಜಾತಿ ಮತ್ತು ವರ್ಗಗಳ ಪ್ರಶ್ನೆಯನ್ನು ಎತ್ತಿಕೊಂಡ ಹಾಗೆಯೇ ತನ್ಮೂಲಕ ಅದರಲ್ಲಿನ ಲಿಂಗತಾರತಮ್ಯದ ಪ್ರಶ್ನೆಗಳನ್ನು ಎತ್ತಿಕೊಳ್ಳುತ್ತದೆ.

ಈ ಕಥಾ ಸಂಕಲನದ 'ಸೇವಂತಿ ಓಲೆ' ಕಥೆಯು ಗಮನಾರ್ಹವಾದುದು. ಇದರಲ್ಲಿ ವರದಕ್ಷಿಣೆಯ ಸಮಸ್ಯೆಯಿದೆ. ವಿದ್ಯಾವಂತ ಗಂಡಸು – ಅದೂ ಬೇರೆ ಜಾತಿಯವನು. ಅವಿದ್ಯಾವಂತ ಹೆಣ್ಣನ್ನು ಪ್ರೀತಿಸುತ್ತಾನೆ. ಸೇವಂತಿ ಮೂಲ್ಯ ಜನಾಂಗಕ್ಕೆ ಸೇರಿದವಳು. ಅವಳನ್ನು ಪ್ರೀತಿಸುವ ಗಂಗಯ್ಯ ಶೆಟ್ಟರ ಜಾತಿಯವನು. ಅವನೂ ಪರಿಸ್ಥಿತಿಯ ಒತ್ತಡಕ್ಕೆ ಬಲಿಯಾಗಿದ್ದಾನೆ. ಶೆಟ್ಟರ ಜಾತಿಯವರಿಗೆ ಅಳಿಯ ಸಂತಾನ ಕಟ್ಟು. ಈ ಅಳಿಯ ಸಂತಾನ ಕಟ್ಟಿನಲ್ಲಿ ಆಸ್ತಿಯೆಲ್ಲವೂ ಮಗಳ ಸೊತ್ತು. ಮಗಳ ಮೂಲಕ ಅಳಿಯನೆ ಯಜಮಾನಿಕೆಯನ್ನು ವಹಿಸುತ್ತಾನೆ. ಈ ಜನಾಂಗದಲ್ಲಿ ಪಿತೃರೂಪಿ ಸಂಸ್ಕೃತಿಗಿಂತ ಮಾತೃರೂಪಿ ಸಂಸ್ಕೃತಿಯು ಪ್ರಧಾನವೆಂದು ಅನಿಸಿದರೂ, ಇದರಲ್ಲಿ ಗಂಡಸು ಮತ್ತು ಹೆಂಗಸಿನ ಸಂಬಂಧವು ಸಂಕೀರ್ಣವಾದುದು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಂಟ ಜನಸಮುದಾಯದಲ್ಲಿನ ಪಲ್ಲಟಗಳನ್ನು 'ಸೇವಂತಿ ಓಲೆ' ಕತೆಯು ಹೇಳುತ್ತದೆ. ಜಾತಿಯ ಬಿಗಿ ಹಿಡಿತದ ಸ್ವರೂಪವೂ ಇದರಲ್ಲಿ ಮುಖ್ಯವಾದುದು. ಕತೆಯ ಕೊನೆಯಲ್ಲಿ ಗಂಗಯ್ಯ ಜಾತಿಯನ್ನು ಹೊಳೆಗೆ ಬಿಸಾಕುವುದರ ಮೂಲಕ ಒಂದು ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾಳೆ.

ಒಡವೆ ಕತೆಯಲ್ಲಿ ಹೀಗೆ ಬರುತ್ತದೆ. ಇದೀಗ ಮಾರಪ್ಪನ ಮಡದಿಯಾಗಿ ಕೈಲಚ್ಚಿಲು ಮನೆಗೆ ಸೊಸೆಯಾಗಿ ಬಂದ ನಂತರ ಆಕೆಯ ದಿನಚರಿಯಲ್ಲಿ ತುಸು ಬದಲಾವಣೆ ಕಂಡಿತು. ಅರಸನ ಅಂಕೆಯಿಲ್ಲ. ಭೂತದ ಕಾಟವಿಲ್ಲ ಎಂಬಂತೆ ದಾರು ತೆಗೆದದ್ದು ದಾರು ಬಿಟ್ಟಿದ್ದು. ಆಕೆ ಅತ್ತೆ ಮನೆಯಲ್ಲಿ ಅಡುಗೆ ಮನೆ ಕಡೆ ತಲೆ ಹಾಕಿಯೂ ಮಲಗಲಿಲ್ಲ. ಗಂಡನ ಎಂಟು ಮುಡಿಯ ಗದ್ದೆಯ ಜೊತೆಗೆ ಅಪ್ಪ ಎಂಕಪ್ಪ ರೈಗಳು ಸ್ವ–ಇಚ್ಛೆಯಿಂದ

ಅಳಿಯನಿಗೆ ಕೊಡುಗೆಯಾಗಿ ಕೊಟ್ಟ ನಾಕು ಮುಡಿ ಗದ್ದೆ ತೋಟಗಳ ಮೇಲ್ವಿಚಾರಣೆ ಎಲ್ಲ ದಾರುವಿನದ್ದಾಯಿತು. ಆಕೆಯದು ಅಳಿಯ ಕಟ್ಟು ಸಂತಾನವಾದರೂ ತವರು ಮನೆಯಲ್ಲಿ ಆಕೆ ಮತ್ತೆ ಕಾರುಬಾರು ನಡೆಸಲು ಇಚ್ಛಿಸಲಿಲ್ಲ. ಆ ಮನೆಯ ನೆನಪನ್ನೇ ಮರೆತಳು ಅಥವಾ ಮರೆತಂತೆ ನಟಿಸಿದಳು" (ಒಡವೆ, ಪು. ೫೫). ಅಳಿಯ ಸಂತಾನಕಟ್ಟು ಕೂಡಾ ಸಾಮಾಜಿಕ ಪರಿವರ್ತನೆಗೆ ಗುರಿಯಾಗಿದೆ. ಈ ಕತೆಯ ಕೊನೆಯಲ್ಲಿ ಪುರುಷ ಕೇಂದ್ರಿತ ಚಿಂತನೆಯ ವಿರುದ್ಧ ಪ್ರತಿಭಟನೆಯು ತುಂಬಾ ಸೂಕ್ಷ್ಮವಾಗಿ ಮಂಡಿತವಾಗಿದೆ:

ದಾರು ಅತ್ತೆಯ ಅಬ್ಬರದ ದನಿಗೆ ಮಲ್ಲಿಗೆ ಮೃದುಮಾತಿನಿಂದಲೇ ಅಂದಳು.

"ನೀವು ಸುಮ್ಕಿರಿ ಮಾಮಿ. ನನಗ್ಯಾಕೆ ಈ ಒಡವೆಗಳೆಲ್ಲ. ಗಾಂಧಿಗಾದ್ರೂ ಕೊಟ್ರೆ ಪುಣ್ಯವಾದರೂ ಬರುತ್ತೆ. ... ಆ ಪುಣ್ಯದಿಂದಾದ್ರೂ ನಿಮ್ಮಗನಿಗೆ ಹೆಣ್ಣಿನ ಹೆಣ್ತನ ಹುಡುಕುವ ಗಂಡಸ್ತನ ಬರಲಿ..." ದಾರುವಿನ ಮಾತು ಕೇಳಿಸಿಕೊಂಡ ಮಾರಪ್ಪ ಒಡವೆ ಗಂಟು ಹಿಡಿದು ಅಲ್ಲೇ ಜಗುಲಿ ಮೇಲೆ ಕುಸಿದು ಕುಳಿತ" (ಒಡವೆ, ಪು. ೯೧). ಇವೆಲ್ಲವೂ ಹೊಸ ಸಮಾಜದ ಹೊಸ ಸನ್ನಿವೇಶಗಳು.

ನಾಗವೇಣಿಯವರ ಕತೆಗಳಲ್ಲಿ ಮೌಲ್ಯರಹಿತ – ಯಜಮಾನ ಪರಂಪರೆಯ ಮನುಷ್ಯರಿದ್ದಾರೆ. ಮೌಲ್ಯ ಸಹಿತ ಮನುಷ್ಯರಿದ್ದಾರೆ. ಉದಾಹರಣೆಗೆ ಧಣಿಗಳ 'ಬೆಳ್ಳಿ ಲೋಟ' ಕತೆಯಲ್ಲಿನ ಧಣಿಗೆ ತನ್ನ ಬೆಳ್ಳಿಲೋಟ ಮುಖ್ಯ. ಅನ್ನಮ್ಮನಿಗೆ ಜೀವನದ ಮೌಲ್ಯ ಮುಖ್ಯ. ಅದರ ಪ್ರತಿಭಟನೆಯು ಮುಖ್ಯ. ಇದೆಲ್ಲವೂ ಯಜಮಾನ ಪರಂಪರೆಯಲ್ಲಿನ ಸಂಘರ್ಷದ ರೂಪಕಗಳಾಗಿವೆ. ನಾಗವೇಣಿಯವರಲ್ಲಿ ಈ ಕಥಾನಕಗಳು ವಸಾಹತೋತ್ತರ ಸಂದರ್ಭದ ಪ್ರಮುಖ ಚಾರಿತ್ರಿಕ ಆಯ್ಕೆಗಳಾಗಿವೆ. ಅದು ಮುಖ್ಯವಾದ ಪ್ರಯತ್ನಗಳಾಗಿವೆ. ಈ ಎಲ್ಲಾ ಕತೆಗಳಿಗೂ ಈ ದೃಷ್ಟಿಯಿಂದ ಸಾಮಾಜಿಕತೆಯ ಬೇರುಗಳಿವೆ. ಅವು ನಿರ್ದಿಷ್ಟ ಕಾಲದ ಪರಿವರ್ತನೆಯ ವ್ಯಾಖ್ಯಾನಗಳಾಗಿವೆ. ಈ ವ್ಯಾಖ್ಯಾನಗಳು ಅಂತಿಮವಾಗಿ ಮಾನವೀಯತೆಯ ನೂತನ ನಿರೂಪಣೆಗಳಾಗಿವೆ.

ನಾಗವೇಣಿಯವರ ಕತೆಗಳಲ್ಲಿ ಸಂಪನ್ಮೂಲವಿರುವ ಮಧ್ಯಮ ವರ್ಗವಿದೆ. ಸುರಕ್ಷಿತವಲ್ಲದ ಜೀವನ ನಡೆಸುವವರಿದ್ದಾರೆ. ಕೋಮು ಸೌಹಾರ್ದವನ್ನು ಧ್ವನಿಪೂರ್ಣವಾಗಿ ಆಚರಿಸುವವರಿದ್ದಾರೆ. ಈ ಕಾರಣದಿಂದ ಜಾಗತಿಕ ಜನಾಂಗ; ರಾಷ್ಟ್ರೀಯತೆಯ ಪ್ರಶ್ನೆ ಮುಂತಾದ ವಿಷಯಗಳ ವಿರುದ್ಧ ಇಲ್ಲಿಯ ಕತೆಗಳು ನಿರ್ದಿಷ್ಟ ಪ್ರತಿಪಾದನೆಯನ್ನು ಮಾಡುತ್ತವೆ.

ನಾಗವೇಣಿಯವರಿಗೆ ಗಂಡು ಹೆಣ್ಣಿನ ಸಂಬಂಧದ ರಾಜಕಾರಣವು ಹುಸಿಯಾದ ಮತ್ತು ಹಸಿಯಾದ ರೂಪವಲ್ಲ. ಅದಕ್ಕೆ ಸಂಕೀರ್ಣ ಮುಖವಿದೆ. ಲೈಂಗಿಕ ರಾಜಕಾರಣಕ್ಕೆ ಮನೆಯ ಮೂಲವಿದೆ. ಸಾಮಾಜಿಕ ಮೂಲವೂ ಇದೆ. ಅದನ್ನು ಅವರು ಕತೆಗಳಲ್ಲಿ ಹೇಳುತ್ತಾರೆ. ಪ್ರತಿಭಟನೆಯೂ ಅವರಿಗೆ ವಾಚ್ಯವಲ್ಲ. ಅವರ ಎಲ್ಲಾ ಕತೆಗಳಲ್ಲಿ ಬೇರೆ ಬೇರೆ

ನೆಲೆಗಳಲ್ಲಿ ವ್ಯಕ್ತವಾಗುತ್ತವೆ – ದಾರು ತನ್ನ ಒಡವೆಯನ್ನು ಕೊಡುವಂತೆ: ಸೇವಂತಿ ಓಲೆಯನ್ನು ನೀರಿಗೆ ಹಾಕುವಂತೆ!

ಪ್ರಾದೇಶಿಕ ನೆನಪುಗಳು ಚಾರಿತ್ರಿಕವಾಗಿ ಮಹತ್ವದವು. ಅದನ್ನು ನಾಗವೇಣಿಯವರು ಅಭಿವ್ಯಕ್ತಿಸುತ್ತಾರೆ. ಪ್ರಾದೇಶಿಕ ಸಂಸ್ಕೃತಿಗೆ ಒಂದು ಕೇಂದ್ರವಿಲ್ಲವೆಂಬುದನ್ನು ಈ ಕತೆಗಳು ಸಾಬೀತುಪಡಿಸುತ್ತವೆ. ಬದಲಾದ ಸನ್ನಿವೇಶದಲ್ಲಿ ಬದಲಾದ ಸಂಬಂಧಗಳ ವ್ಯಾಖ್ಯೆಯೂ ಕೂಡಾ ಸುಂದರವಲ್ಲ. ಅದನ್ನು 'ಮೊಯುವ ಆಟ'ದಲ್ಲಿ ಹೇಳಲಾಗಿದೆ. ಈ ದೃಷ್ಟಿಯಿಂದ ನಾಗವೇಣಿಯವರ ಕತೆಗಳು ವಸಾಹತೋತ್ತರ ಕಾಲದ ಪ್ರಮುಖ ಸಾಮಾಜಿಕ ಪಠ್ಯಗಳಾಗಿವೆ. ಈ ಪಠ್ಯಗಳಾಚೆಗೂ ಸಾಮಾಜಿಕ ಚರಿತ್ರೆಯಿದೆ. ಆದರೆ ನಾಗವೇಣಿಯವರ ಗ್ರಹಿಕೆಯು ಸ್ತ್ರೀವಾದದ ದೃಷ್ಟಿಯಿಂದ ಮುಖ್ಯವಾಗಿದೆ. ಕ್ರೋಢೀಕರಿಸಿ ಹೇಳಬೇಕೆಂದರೆ – ವಸಾಹತೋತ್ತರ ಸಂದರ್ಭದಲ್ಲಿ ಸ್ವಾತಂತ್ರ್ಯ ಮತ್ತು ಸಮಾನತೆ ಎರಡೂ ಸ್ತ್ರೀಯರಿಗೆ ದೊರೆಯಲಿಲ್ಲ. ಪ್ರತಿಯೊಂದು ಜಾತಿಯಲ್ಲಿಯೂ ಸ್ತ್ರೀಯರು ಎರಡನೆಯ ದರ್ಜೆಯ ಪ್ರಜೆಯಾಗಿದ್ದಾರೆ. ಅಳಿಯ ಸಂತಾನಕಟ್ಟು ಕೂಡಾ ಸ್ತ್ರೀಯರ ದೃಷ್ಟಿಯಿಂದ ಸ್ವಾತಂತ್ರ್ಯದ ಅವಕಾಶ ಕಲ್ಪಿಸಿಲ್ಲ. ಶಿಕ್ಷಣ ವಂಚಿತ ಮಹಿಳೆಯರ ಸಮಸ್ಯೆ ಬೇರೆ. ನಾಗವೇಣಿಯವರು ಈ ವಿಷಯಗಳ ಬಗ್ಗೆ ಪ್ರತಿಕ್ರಿಯಿಸಿದ್ದಾರೆ. ಅಧಿಕಾರದ ವಿವಿಧ ಕೇಂದ್ರಗಳು ನಾಗವೇಣಿಯವರ ಕತೆಗಳಲ್ಲಿ ಬಿಂಬಿತವಾಗಿವೆ. ಈ ಕತೆಗಳು ಮುಖ್ಯವಾಗಿ ಹೇಳುವ ಸಂಗತಿಗಳು ಚರ್ಚೆಗೆ ಬೇಕಾದ ಬಾಗಿಲುಗಳನ್ನು ತೆರೆದಿವೆ.

ವಸಾಹತೋತ್ತರ ಕಾಲದ ಪ್ರಮುಖ ಸಮಸ್ಯೆಗಳನ್ನು ನಾಗವೇಣಿಯವರು ತಮ್ಮ ಕತೆಗಳಲ್ಲಿ ಚರ್ಚಿಸುತ್ತಾರೆ. ಈ ದೃಷ್ಟಿಯಿಂದ ಲೇಖಕರು ಗಮನಿಸದಿರುವ ಸಮಸ್ಯೆಗಳನ್ನು ನಾಗವೇಣಿಯವರು ಗಮನಿಸಿರುವುದು ಮುಖ್ಯ.

ವಸಾಹತೋತ್ತರ ಕಾಲದ ಪರಿಸ್ಥಿತಿ ಮತ್ತು ಅದರ ಪರಿಣಾಮಗಳನ್ನು ಕುರಿತು ಆಲೋಚಿಸಬೇಕು. ವಸಾಹತೋತ್ತರ ಕಾಲದ ಚಿಂತನೆಯ ಕ್ರಮಗಳು ಕೆಲವು ವಿಷಯಗಳ ಬಗ್ಗೆ ಗಂಭೀರವಾದ ಪ್ರಾರಂಭವನ್ನು ಮಾಡಿವೆ. ಚಾರಿತ್ರಿಕವಾಗಿ ಮತ್ತೆ ಹೊಸ ಚಿಂತನೆಗಳ ಆರಂಭವನ್ನು ವಸಾಹತೋತ್ತರ ಕಾಲದ ವ್ಯಾಖ್ಯೆಗಳು ಮಂಡಿಸುವ ಪ್ರಯತ್ನವನ್ನು ಮಾಡಿದವು. ವಸಾಹತುಶಾಹಿ ಅನುಭವದ ಭಾರದಿಂದ ತಪ್ಪಿಸಿಕೊಳ್ಳಲು 'ಜನಾಂಗಿಕ ವಿಸ್ಮೃತಿ' ಯುರೋಪ್ ಕೇಂದ್ರಿತ ಚಿಂತನೆಗಳ ವಿರೋಧ 'ಆಧುನಿಕ ಪ್ರಭುತ್ವ' 'ಆಧುನಿಕತೆ ಸಂಸ್ಕೃತಿ' ಚಿಂತನೆ ಮುಂತಾದ ಪರಿಕಲ್ಪನೆಗಳು ಚಾಲ್ತಿಗೆ ಬಂದವು.

ವಸಾಹತು ಶಾಹಿ ಅನುಭವಕ್ಕೆ ಪ್ರತಿಕ್ರಿಯಿಸಿದಾಗ ಹೇಗೆ ಬಹುದಾರಿಗಳಿದ್ದವೋ ಅದೇ ರೀತಿಯಲ್ಲಿ ವಸಾಹತೋತ್ತರ ಸಂದರ್ಭಕ್ಕೂ ನಾವು ನೀಡುವ ಪ್ರತಿಕ್ರಿಯೆಗಳಿಗೆ ಬಹು ದಾರಿಗಳಿವೆ. ವಸಾಹತುಶಾಹಿ ಅನುಭವ ಮತ್ತು ಅದರ ಅನಂತರದ ಅನುಭವದ ಜಗತ್ತು ಅತ್ಯಂತ ಸಂಕೀರ್ಣವಾದುದು. ಎರಡೂ ಸಂದರ್ಭಗಳಲ್ಲಿ ಏಕಮುಖ

ಚಿಂತನೆಯೆಂಬುದು ಇಲ್ಲ. ಏಕ ಕೇಂದ್ರಿತ ಚಿಂತನೆಯು ಅದಕ್ಕೆ ಉತ್ತರವೂ ಅಲ್ಲ. ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಎರಡು ಪ್ರತಿಕ್ರಿಯೆಗಳಿದ್ದವು: ಒಂದು ವಸಾಹತುಶಾಹಿ ಅನುಭವ ರೂಪಿಸಿದ ವೈಚಾರಿಕತೆಯನ್ನು ಒಪ್ಪುವ ಅಥವಾ ವಿರೋಧಿಸುವ ಸ್ಥಿತಿ. ಇನ್ನೊಂದು ನೇರವಾದ ಮುಖಾಮುಖಿಯಾಗುವ ಸ್ಥಿತಿ. ಒಂದನೆಯದು ಬೌದ್ಧಿಕ ಸ್ವೀಕಾರ ಮತ್ತು ಪ್ರತಿರೋಧವನ್ನು ಸೂಚಿಸುತ್ತದೆ. ಎರಡನೆಯದು ನೇರವಾದ ರಾಜಕೀಯ ಹೋರಾಟಗಳನ್ನು ಅವಲಂಬಿಸಿದೆ. ಮೊದಲನೆಯದು ಒಂದು ವೈಚಾರಿಕ ಚಿಂತನೆಯಾಗಿ ರೂಪುಗೊಂಡರೆ, ಎರಡನೆಯದು ರಾಷ್ಟ್ರೀಯತಾವಾದಿ ವಿವಿಧ ಆಂದೋಲನಗಳಲ್ಲಿ ವ್ಯಕ್ತವಾಗಿದೆ. ಆದರೆ ವಸಾಹತು ಶಾಹಿ ಅನುಭವವೆನ್ನುವ ಭೂತ ಕಾಲವು ಒಂದು ಹಸಿಹಸಿಯಾದ ರಾಜಕೀಯ ಅನುಭವವಲ್ಲ. ಅದು ಪ್ರಾದೇಶಿಕ ಹೋರಾಟವಾಗಿದೆ. ಅದು ಸಾಹಿತ್ಯ ರೂಪವಾಗಿದೆ. ಜ್ಞಾನ ಜಗತ್ತಿನ ನಡುವಣ ಜಗಳವಾಗಿದೆ. ವಸಾಹತುಶಾಹಿ ಅನುಭವದ ಅನಂತರ ಅನೇಕ ಪ್ರತಿಕ್ರಿಯೆಗಳು ಕೂಡಾ ಇದೇ ರೀತಿಯದು. ಸದ್ಯದ ನಮ್ಮ ಎದುರು ಇರುವ ಎರಡು ಪ್ರಮುಖವಾದವುಗಳನ್ನು ನಾವು ಇದೇ ಹಿನ್ನೆಲೆಯಿಂದ ಗಮನಿಸಬಹುದು: ಜಾಗತೀಕರಣ ಮತ್ತು ಕೋಮುವಾದಕ್ಕೆ ನಮ್ಮ ಪ್ರತಿಕ್ರಿಯಗಳು ಎರಡು ಬಗೆಯಲ್ಲಿ ಜರುಗುತ್ತಿವೆ. ಎರಡೂ ನಮ್ಮಲ್ಲಿ ಬೌದ್ಧಿಕ ಪ್ರತಿಕ್ರಿಯೆಗಳಿವೆ. ಎರಡನ್ನು ವಿರೋಧಿಸಲು ರಾಜಕೀಯ ಹೋರಾಟಗಳೂ ನಡೆದಿವೆ. ಪರ್ಯಾಯ ಕೃಷಿ ಪದ್ಧತಿ; ಅಂತರರಾಷ್ಟ್ರೀಯ ಸರಕುಗಳ ವಿರೋಧಗಳು ಒಂದೆಡೆಯಲ್ಲಿ ಜರುಗಿದರೆ ಮತ್ತೊಂದು ಜ್ಞಾನದ ಅಧಿಕೃತ ವಕ್ತಾರತ್ವ ಪ್ರಶ್ನಿಸಲಾಗುತ್ತದೆ. ಕೋಮುವಾದದ ಬಗೆಗೂ ಇದೇ ರೀತಿ: ಇದಕ್ಕೆ ಜನ ಜಾಗೃತಿಯು ಒಂದೆಡೆಯಲ್ಲಿ ನಡೆಯುತ್ತಿದ್ದರೆ ಮತ್ತೊಂದೆಡೆಯಿಂದ ಬೌದ್ಧಿಕವಾಗಿಯೂ ಕೋಮುವಾದವು ಹೇರುವ ಏಕ ಕೇಂದ್ರಿತ ಸಂಸ್ಕೃತಿ ಚಿಂತನೆಯನ್ನು ಪ್ರಶ್ನಿಸಲಾಗುತ್ತದೆ. ನಾಗವೇಣಿಯವರ ಕತೆಗಳಲ್ಲಿ ಏಕ ಕೇಂದ್ರಿತ ಸಂಸ್ಕೃತಿಯ ವಿರೋಧ ಬಂದಿರುವುದು ಮತ್ತು ಅದರ ನಿರ್ವಹಣೆಯ ಕ್ರಮವು ಗಮನಾರ್ಹವಾಗಿದೆ.

ವಸಾಹತುಶಾಹಿ ಅನುಭವ ಅನಂತರ ನಮ್ಮ ಪ್ರತಿಕ್ರಿಯೆಗಳು ಅನೇಕ ರೀತಿಯ ಸಾಂಸ್ಕೃತಿಕ ರೂಪಗಳನ್ನು ಹೊಂದಿವೆ ಮತ್ತು ವಸಾಹತೋತ್ತರ ಕಾಲಘಟ್ಟದಲ್ಲಿಯೂ ನಮ್ಮ ಪ್ರತಿಕ್ರಿಯೆಗಳು ಬೇರೆ ಬೇರೆ ರೀತಿಯ ಸಾಮಾಜಿಕ; ಚಾರಿತ್ರಿಕ ಸಂಕಥನಗಳನ್ನು ಹೊಂದಿವೆ. ಸಾಹಿತ್ಯ ಪಠ್ಯಗಳು ಈ ಸಂವಾದಗಳನ್ನು ಗ್ರಹಿಸಿರುವ ಬಗೆಗಳು ಕೂಡಾ ಭಿನ್ನವಾಗಿವೆ. ವಸಾಹತೋತ್ತರ ಸಂದರ್ಭದ ಬೆಳವಣಿಗೆಗಳಂತೂ ಅನೇಕ ಅಸಾಂಗತ್ಯ ಮತ್ತು ಆತಂಕಗಳನ್ನು ಸೃಷ್ಟಿಸಿವೆ. ವಸಾಹತೋತ್ತರ ಸಂದರ್ಭದ ಸಾಮಾಜಿಕ ಪರಿಸ್ಥಿತಿಯಲ್ಲಿ ಒಂದು ಕಡೆಯಿಂದ ಆಧುನಿಕತೆ; ಮತ್ತೊಂದು ಕಡೆಗೆ ಅತ್ಯಂತ ತೀವ್ರವಾದ ಬಡತನ; ಅನಕ್ಷರತೆ; ನಿರುದ್ಯೋಗಗಳು ಕಾಡಿದವು. ವಸಾಹತು ಕಾಲದಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯವೆನ್ನುವುದು ದೃಶ್ಯದ ರೂಪಕವಾಗಿತ್ತು. ಆದರೆ ವಸಾಹತೋತ್ತರ ಸಂದರ್ಭದಲ್ಲಿ ಸ್ವಾತಂತ್ರ್ಯ ಸಿಕ್ಕಿದೆ. ಭಾರತ ಸ್ವತಂತ್ರವಾಗಿದೆ. ಹಾಗೆಂದು ಈ ಸ್ವಾತಂತ್ರ್ಯ ಎಲ್ಲರಿಗೂ ಸಿಕ್ಕಿಲ್ಲ.

ನಾಗವೇಣಿಯವರ ಕತೆಗಳಲ್ಲಿ ಬರುವ ಸ್ವಾತಂತ್ರ್ಯವಿಲ್ಲದ ಮನುಷ್ಯರು ಈ ಕಾರಣದಿಂದ ಕುತೂಹಲದಾಯಕರಾಗಿದ್ದಾರೆ. ಈ ಕತೆಗಳಲ್ಲಿ ಬರುವ ಸ್ತ್ರೀಯರಿಗೆ ಸ್ವಾತಂತ್ರ್ಯ ಗೊತ್ತಿಲ್ಲ ಮತ್ತು ಅವರಲ್ಲಿ ಅನಕ್ಷರಸ್ಥರಿಗೆ ಇರುವ ಬಯಕೆಯೆಂದರೆ ಬದುಕುವ ; ಅಸ್ತಿತ್ವವನ್ನು ಕಾಪಾಡಿಕೊಳ್ಳುವ ಆಸೆ.

ಸ್ತ್ರೀವಾದದ ದೃಷ್ಟಿಯಿಂದ ಪ್ರಾದೇಶಿಕತೆಯೆಂದರೇನು? ಸ್ವಾತಂತ್ರ್ಯವೆಂದರೇನು? ರಾಷ್ಟ್ರೀಯ ಚಳುವಳಿಯೆಂದರ್ರೇನು? ಎಂಬುದನ್ನು ನಾಗವೇಣಿಯವರ ಕತೆಗಳು ಕೇಳುತ್ತವೆ. ಇದು ಬಹಳ ಮುಖ್ಯವಾದುದು.

(೩.೫. ೨೦೦೩)

ಭಾಗ ೪

# ಆಧುನಿಕೋತ್ತರವಾದ

## ಓದುಗ ಕೇಂದ್ರಿತ ವಿಮರ್ಶೆ
## ಸ್ವೀಕೃತಿ ಸಿದ್ಧಾಂತ

ಈಚೆಗೆ ಇಂಗ್ಲಿಷ್ ಸಾಹಿತ್ಯ ವಿಮರ್ಶೆಯಲ್ಲಿ ಓದುಗ ಕೇಂದ್ರಿತ ಸಿದ್ಧಾಂತವು ಹೆಚ್ಚು ಚಾಲ್ತಿಯಲ್ಲಿದೆ. ಈ ತನಕದ ಎಲ್ಲಾ ಸಿದ್ಧಾಂತಗಳಿಗಿಂತ ಇದು ಹೆಚ್ಚು ಭಿನ್ನವಾಗಿದೆ. ಓದುಗ ಕೇಂದ್ರಿತ ವಿಮರ್ಶೆಯು ಪಠ್ಯ. ಅದು ಓದುಗನ ಮೇಲೆ ಬೀರುವ ಪ್ರಭಾವ, ಭಾಷೆಯ ಸಂವಹನ ಸಾಧ್ಯತೆಯನ್ನು ಕುರಿತು ಚರ್ಚಿಸುತ್ತದೆ. ಇದರ ಆಶಯವು ಇಷ್ಟೆ: ಒಂದು ಕೃತಿಯಲ್ಲಿಯೇ ಎಲ್ಲಾ ಅರ್ಥವು ಇಲ್ಲ. ಕೃತಿಯನ್ನು ಓದುವ ಕ್ರಮಕ್ಕೆ ಅನುಸಾರವಾಗಿ ಇದು ಭಿನ್ನವಾಗುತ್ತದೆ. ಕೃತಿಯ ಭಾಷೆ, ಭಾಷೆಯ ಅನುಭವ ಮತ್ತು ಅದು ಸೃಷ್ಟಿಸುವ ಹೊಂದಾಣಿಕೆಯನ್ನು ಓದುಗ ಕೇಂದ್ರಿತ ವಿಮರ್ಶೆಯು ಚರ್ಚಿಸುತ್ತದೆ. ಕೃತಿಯ ಭಾಷೆಯು ಯಾವಾಗಲೂ ಅದರದೆ ಆದ ಸಂವಾದವನ್ನು ರೂಪಿಸುತ್ತದೆಯಾದ್ದರಿಂದ ಅದರ ಅನುಭವವು ಬೇರೆಯಾಗಿರುತ್ತದೆಯೆಂದು ಓದುಗ ಕೇಂದ್ರಿತ ವಿಮರ್ಶೆಯ ನಿಲುವಾಗಿದೆ. ಭಾಷೆಯ ಸಂವಹನವು ಅದರ ಅರ್ಥ ಮತ್ತು ಅದು ಹೇಳುವ ವಿಷಯಗಳಿಗೆ ಸಂಬಂಧಪಟ್ಟು ವಿಭಿನ್ನವಾಗಿರುತ್ತದೆ. ತದರೋವ್‌ನ ಪ್ರಸಿದ್ಧವಾದ ಭಾಷೆಯ ಕುರಿತ ಚರ್ಚೆಯು ಈ ರೀತಿಯಾಗಿ ಹೇಳುತ್ತದೆ: ಸಾಹಿತ್ಯದ ಚರ್ಚೆಯ ಸಂದರ್ಭದಲ್ಲಿ ಅದರ ಭಾಷೆಯ ವಿವರಣೆಯು ಮುಖ್ಯ. ಸಾಹಿತ್ಯಿಕ ಭಾಷೆಯೆಂದರೆ ಅದರ ಅರ್ಥಸೃಷ್ಟಿಯನ್ನು ಒಳಗೊಂಡಿರುತ್ತದೆ. ಹೀಗಾಗಿ ಭಾಷೆಯು ಸೂಚಿಸುವ ಅರ್ಥಗಳನ್ನು ಹೊರತುಪಡಿಸಿ ಕಾವ್ಯದ ಮೀಮಾಂಸೆ ಅಸಾಧ್ಯ. ಓದುವುದು ಮತ್ತು ಅರ್ಥವಿಸುವುದು ಇಲ್ಲಿ ಮುಖ್ಯವಾಗಿದೆ. ಕಾವ್ಯ ಸಂವಹನವು ಭಾಷೆಯ ವಿಷಯದಲ್ಲಿ ಮುಕ್ತವಾಗಿದ್ದು ಅದು ಯಾವುದೇ ಇತ್ಯಾತ್ಮಕ ಅರ್ಥವನ್ನು ಹೇಳುತ್ತಿಲ್ಲ. ಈ ದೃಷ್ಟಿಯಿಂದ ಸಾಹಿತ್ಯಿಕ ಸಂವಹನ ಎನ್ನುವುದು ಯಾವುದೇ ಒಂದು ಸೂಚನೆಯನ್ನು ಒಳಗೊಂಡಿರುವುದಿಲ್ಲವೆಂದು ಓದುಗ ಕೇಂದ್ರಿತ ವಿಮರ್ಶೆಯು

ಪರಿಭಾವಿಸುತ್ತದೆ. ಫುಕೊ ತನ್ನ 'ಅನ್ ಆರ್ಕ್ಯಾಲಜಿ ಆಫ್ ನಾಲೆಡ್ಜ್' ಕೃತಿಯಲ್ಲಿ ಹೀಗೆ ಹೇಳಿದ್ದಾನೆ. 'ಅವಕಾಶ (Space) ಅಂತರ, ಬಣ್ಣ, ಬೆಳಕು ಸಂಯೋಜನೆ

ಮುಂತಾದವುಗಳನ್ನು ಬರೀ ಕಾವ್ಯದ ದೃಷ್ಟಿಯಿಂದ ಮಾತ್ರವೇ ಚರ್ಚಿಸಲು ಸಾಧ್ಯವಿಲ್ಲ. ಈ ದೃಷ್ಟಿಯಿಂದ ಸಂಸ್ಕೃತಿ. ಸಾಮಾಜಿಕ ಜೀವನ, ಜ್ಞಾನ ಮತ್ತು ಅಧಿಕಾರಗಳ ನಡುವಿನ ನಿರ್ವಚನಗಳು ಬೇರೆ ಬೇರೆ ಮಾದರಿಯ ಸಂವಹನದ ಸಾಧ್ಯತೆಗಳನ್ನು ಒಳಗೊಂಡಿರುತ್ತದೆ. ಹೀಗಾಗಿ ಸಂವಹನ ಎನ್ನುವುದು ಆಯ್ಕೆಗೆ ಸಂಬಂಧಪಟ್ಟಂತೆ ರೂಪುಗೊಳ್ಳುತ್ತದೆ.' ಸಂವಹನವು ಕಾರ್ಯಕಾರಣ, ಪರಿಣಾಮ ಮುಂತಾದ ಅಂಶಗಳನ್ನು ಒಳಗೊಂಡಿರುತ್ತದೆ ಯೆನ್ನುವುದನ್ನು ಯಾರೂ ಅಲ್ಲಗಳೆಯುವುದಿಲ್ಲ. ಚಾರಿತ್ರಿಕ ವಿಮರ್ಶೆಯ ಪದ್ಧತಿಯು ಕೃತಿಕಾರ ಕೃತಿಯ ನಡುವೆ ಘನಿಷ್ಠ ಸಂಬಂಧವನ್ನು ಸ್ಥಾಪಿಸುತ್ತದೆ. ಕೃತಿಕಾರ ಮತ್ತು ಕೃತಿಗೆ ಇರುವ ಸಂಬಂಧವು ಕರುಳ ಬಳ್ಳಿಯ ರೀತಿಯದು ಎಂದು ಅದು ಪ್ರತಿಪಾದಿಸುತ್ತದೆ. ಬರಿಯ ಕೃತಿಯನ್ನು ಮಾತ್ರ ನೋಡುವುದು ಸರಿಯಲ್ಲ ಅದರ ಸಾಮಾಜಿಕ ಹಿನ್ನೆಲೆಯನ್ನೂ ನೋಡಬೇಕು ಎನ್ನುವುದು ಚಾರಿತ್ರಿಕ ವಿಮರ್ಶೆಯ ನಿಲುವು. ಈ ರೀತಿಯ ನಿಲುವುಗಳನ್ನು ಓದುಗ ಕೇಂದ್ರಿತ ವಿಮರ್ಶೆಯು ಪ್ರಶ್ನಿಸುತ್ತದೆ. ಬಾರ್ಥಸ್, ಜೂಲಿಯಾ ಕ್ರಿಸ್ಟೇವ, ತದರೋವ್‌ನಂತಹ ವಿದ್ವಾಂಸರು ಕೃತಿಯೊಂದರ ಅರ್ಥಗಳ ಬೇರೆ ಬೇರೆ ಅನ್ವಯಗಳ ಸಾಧ್ಯತೆಯನ್ನು ಚರ್ಚಿಸಿದರು. ಒಂದೇ ಕೃತಿಗೆ ಹಲವು ಅರ್ಥಗಳು ಇರಲು ಸಾಧ್ಯವೆಂದು ಅವರು ಪ್ರತಿಪಾದಿಸಿದರು. ಒಂದು ಪದ ಅದು ಭಾಷೆಯಲ್ಲಿ ದಾಖಲಾಗುವ ಕ್ರಮ. ಅದಕ್ಕಿರುವ ವಾಸ್ತವದ ಹಿನ್ನೆಲೆ ಇವೆಲ್ಲವು ಬೇರೆ ಬೇರೆಯಾಗಿದ್ದು ಆಲೋಚನೆ ಮತ್ತು ಭಾಷೆಗೆ ಅನೇಕ ರೀತಿಯ ಭಿನ್ನತೆ ಇರುತ್ತದೆ ಎಂದು ಡೆರಿಡಾ ಪ್ರತಿಪಾದಿಸಿದ. ಅವನು ಬರಹ ಮತ್ತು ಆಲೋಚನೆಗೆ ವ್ಯತ್ಯಾಸವಿರಲು ಸಾಧ್ಯವೆಂದು ಪ್ರತಿಪಾದಿಸಿದ್ದಾನೆ. ಹೇಗೆ ಬರಹ ಮತ್ತು ಆಲೋಚನೆಗೆ ವ್ಯತ್ಯಾಸವಿದೆಯೋ ಅದೇ ರೀತಿಯಲ್ಲಿ ಬರಹ ಮತ್ತು ಓದಿನ ಕ್ರಮಕ್ಕೂ ವ್ಯತ್ಯಾಸವಿರುತ್ತದೆ. ಎಂದು ಆತ ಪ್ರತಿಪಾದಿಸಿದನು.

ಬಾರ್ತಸ್ ತನ್ನ ಚರ್ಚೆಯಲ್ಲಿ ಓದುವ ಅಭ್ಯಾಸ ಮತ್ತು ಅರ್ಥಗಳನ್ನು ಗ್ರಹಿಸುವ ಕ್ರಮ ಇವು ಬಹಳ ಪ್ರಧಾನವೆಂದು ಪರಿಗಣಿಸಿದ್ದಾನೆ. ಬಾರ್ತನ ಪ್ರಕಾರ ಕೃತಿಯನ್ನು ಬರೆದು ಮುಗಿಸಿದ ಮೇಲೆ ಕೃತಿಕಾರನಿಗೂ ಕೃತಿಗೂ ಸಂಬಂಧವೇ ಇಲ್ಲ. ಯಾವುದೇ ಬರವಣಿಗೆಯಲ್ಲಿ ಅದು ಕೊಡುವ ಸೂಚನೆಗಳು ಅನೇಕ ಅರ್ಥ ವಿನ್ಯಾಸವನ್ನು ಒಳಗೊಂಡಿರಲು ಸಾಧ್ಯವೆಂದು ಓದುಗ ಕೇಂದ್ರಿತ ವಿಮರ್ಶೆಯು ಪರಿಭಾವಿಸುತ್ತದೆ. ಒಂದೇ ಕೃತಿಯನ್ನು ಅನೇಕ ಓದುಗರು ಅನೇಕ ರೀತಿಯಲ್ಲಿ ಅರ್ಥೈಸಿಕೊಂಡಾಗ ಯಾವುದು ಸರಿ ಯಾವುದು ತಪ್ಪು ಎಂಬ ಪ್ರಶ್ನೆ ಮುಖ್ಯವಲ್ಲ. ನವ್ಯ ವಿಮರ್ಶೆಯು ಕೃತಿಯನ್ನು ಅರ್ಥವಿಸಿಕೊಳ್ಳುವಾಗ ವಸ್ತುನಿಷ್ಠ ಓದು ಬೇಕೆಂದು ಪ್ರತಿಪಾದಿಸುತ್ತದೆ.

ಓದುವುದು ಎನ್ನುವುದು ಓದಿನ ಅನುಭವಕ್ಕೆ ಸಂಬಂಧಪಟ್ಟ ಪ್ರಕ್ರಿಯೆಯಾಗಿದ್ದು ಅದು ಬೇರೆ ಬೇರೆ ನೆಲೆಗಳನ್ನು ಒಳಗೊಂಡಿರುತ್ತದೆಯೆನ್ನುವುದು ಓದುಗ ಕೇಂದ್ರಿತ ವಿಮರ್ಶೆಯ ನಿಲುವಾಗಿದೆ. ಸ್ಟ್ಯಾನ್ಲಿಪಿಶ್ ಒಂದು ಸಂದರ್ಭದಲ್ಲಿ ಹೇಳುವ ಹಾಗೆ, 'ಯಾರನ್ನು ಉದ್ದೇಶಿಸಿ ಕೃತಿಯನ್ನು ಬರೆಯಲಾಗಿದೆಯೋ ಆ ಕೃತಿಯು ಅವನಿಗೆ

ಒಂದು ಅರ್ಥವನ್ನು ಕೊಟ್ಟರೆ ಅದೇ ಪಠ್ಯವು ಇನ್ನೊಂದು ಕಾಲದಲ್ಲಿ ಇನ್ನೊಂದು ಸಂದರ್ಭದಲ್ಲಿ ಬೇರೊಬ್ಬ ಓದುಗನಿಗೆ ಬೇರೊಂದು ಅರ್ಥವನ್ನು ಕೊಡಲು ಸಾಧ್ಯ.' ಯಾವುದೇ ಆಲೋಚನಾ ವಿಧಾನದಿಂದಲೇ ಸಾಹಿತ್ಯದ ಚರ್ಚೆಯನ್ನು ಪ್ರಾರಂಭವಾಗುತ್ತದೆ. ಅಂತಿಮವಾಗಿ ಓದುಗ ಕೃತಿಯ ಭಾಷೆಯಲ್ಲಿಯೇ ಅನುಸಂಧಾನ ಮಾಡಬೇಕಾಗುತ್ತದೆ. ಆದುದರಿಂದ ಓದುವ ಕ್ರಿಯೆ ಮುಖ್ಯವಾಗಿದೆ. ಎಫ್.ಆರ್.ಲೀವಿಸ್‌ನ ಶೈಲಿಯಲ್ಲಿ ಹೇಳುವುದಾದರೆ ಪ್ರಬುದ್ಧ ಓದುಗ, ಸಾಹಿತ್ಯ ಕೃತಿಯನ್ನು ಅರ್ಥೈಸಿಕೊಳ್ಳುವಾಗ ಕೃತಿಯ ಸಾಂಸ್ಕೃತಿಕ ಮತ್ತು ನೈತಿಕ ಹಿನ್ನೆಲೆಗಳನ್ನು ಅರ್ಥೈಸಿಕೊಳ್ಳಲು ಸಾಧ್ಯ. ಒಂದು ಸಾಹಿತ್ಯಿಕ ಕೃತಿಯಲ್ಲಿ ಏನನ್ನು ಹೇಳಲಾಗಿದೆಯೋ ಅದನ್ನು ಅತ್ಯಂತ ಹತ್ತಿರದಿಂದ ಓದುವ ಓದುಗನು ಕೃತಿಯ ಸತ್ಯಕ್ಕೆ ಭಂಗ ಬಾರದ ರೀತಿಯಲ್ಲಿ ಓದುತ್ತಾನೆ. ಪರಿಪೂರ್ಣವಾದ ಓದು ಈ ಬಗೆಯದ್ದು ಎಂದು ಹೇಳಬಹುದು.

ಯಾವುದೇ ಕೃತಿಯು ಒಳಗೊಳ್ಳುವ ಅರ್ಥವು ಚಲನರಾಹಿತ್ಯವಾದುದಲ್ಲ. ಅರ್ಥಗಳು ಓದುವ ಮತ್ತು ವಿಮರ್ಶಿಸುವ ಹಂತದಲ್ಲಿ ಬೇರೆ ಬೇರೆಯಾಗಿರಲು ಸಾಧ್ಯವೆಂದು ಓದುಗ ಕೇಂದ್ರಿತ ವಿಮರ್ಶೆಯ ನಿಲುವಾಗಿದೆ. ಯಾವುದೇ ಪ್ರಬುದ್ಧ ಓದುಗನು ಒಂದು ಕೃತಿಯನ್ನು ಓದಿ ಅರ್ಥ ಮಾಡಿಕೊಳ್ಳುವ ಕ್ರಮಕ್ಕೂ, ನಿರ್ದಿಷ್ಟ ಉದ್ದೇಶದಿಂದ ಓದಿ ಅರ್ಥಮಾಡಿಕೊಳ್ಳುವ ಕ್ರಮಕ್ಕೂ ಬಹಳ ವ್ಯತ್ಯಾಸವಿದೆ. ಹೀಗಾಗಿ ಕೃತಿಯೊಂದರ ಅರ್ಥ ಓದುಗರ ಮನಸ್ಸಿನಲ್ಲಿ ಬೇರೆ ಬೇರೆ ಪ್ರಭಾವಗಳನ್ನು ಬೀರುತ್ತದೆ. ಬಾರ್ಥಸ್ "ನಿಕಟ ಓದು" ಎಂದು ಪ್ರತಿಪಾದಿಸುವಾಗ ವಸ್ತುನಿಷ್ಠವಾದ ಕೃತಿ ವಸ್ತುನಿಷ್ಠವಾದ ಅರ್ಥ ವಸ್ತುನಿಷ್ಠವಾದ ಸಾಧ್ಯತೆಗಳನ್ನು ಕುರಿತು ಮಾತನಾಡಿರುವುದು ಗಮನಾರ್ಹ. ಮಹಾಕಾವ್ಯ ಪರಂಪರೆಯ ಕೃತಿಗಳು ಅಥವಾ ಶ್ರವ್ಯ ಪರಂಪರೆಯ ಕೃತಿಗಳು ಒಂದು ದೃಷ್ಟಿಯಿಂದ ಕೇಳುವ ಕೇಂದ್ರಿತ ಪಠ್ಯ ಅಥವಾ ಓದುಗ ಕೇಂದ್ರಿತ ಪಠ್ಯಗಳಾಗಿರುತ್ತವೆ. ಓದುವ/ಕೇಳುವ ಸಂದರ್ಭಗಳಲ್ಲಿ ಪಠ್ಯವು ಬೇರೆ ಬೇರೆಯಾಗುವ ಕ್ರಮವನ್ನು ಓದುಗ ಕೇಂದ್ರಿತ ಪಠ್ಯವೆಂದು ಕರೆಯಲಾಗಿದೆ. ಓದುವ ಕ್ರಮಕ್ಕೆ, ಕೇಳುವ ಕ್ರಮಕ್ಕನುಸಾರವಾಗಿ ಪಠ್ಯವು ಬೇರೆ ಬೇರೆ ನಿರ್ಮಾಣದ ಪ್ರಕ್ರಿಯೆಯನ್ನು ಒಳಗೊಳ್ಳುತ್ತದೆ. ಇದರಲ್ಲಿ ಓದುಗನು ಪ್ರಧಾನ ಪಾತ್ರ ವಹಿಸುತ್ತಾನೆ. ಕೇಳುವ ಸಂದರ್ಭದಲ್ಲಿ ಲಯವು ಮುಖ್ಯವಾಗಿದೆ. ಮತ್ತೊಂದು ವಿಧಾನವೆಂದರೆ ಸೂಚಕ ಅಥವಾ ಗ್ರಂಥಕರ್ತನು ಪಠ್ಯದ ಮೇಲೆ ಸಂಪೂರ್ಣ ಹಿಡಿತ ಸಾಧಿಸುವುದು. ಇದನ್ನು 'ಬರಹಗಾರನ ಪಠ್ಯ'ವೆಂದು ಕರೆಯಬಹುದು. ಯಾವುದೇ ಒಂದು ಪಠ್ಯದ ಸಾಂಸ್ಕೃತಿಕ ಅರ್ಥವನ್ನು ಗ್ರಹಿಸುವುದು ಮತ್ತು ಪಠ್ಯದ ಬಹುಮುಖತೆ ಆಂತರಿಕ ಪಠ್ಯಗಳ ಹೊಂದಾಣಿಕೆ ಸಾಂಸ್ಕೃತಿಕ ಪರಿಕರಗಳನ್ನು ಇಟ್ಟುಕೊಂಡು ಚರ್ಚಿಸುವ ಕ್ರಮ. ಪರಿಪೂರ್ಣ ಓದುಗನಿಗೆ/ಶ್ರೇಷ್ಠ ಓದುಗನಿಗೆ ಸಾಧ್ಯವಾಗುತ್ತದೆ. ಈ ರೀತಿಯ ಶ್ರೇಷ್ಠ ಓದಿನ ಕ್ರಮವನ್ನು Barthes – Super Reader ಎಂದು ಕರೆಯುತ್ತಾನೆ. ದಿನ ದಿನದ ಅಗತ್ಯಕ್ಕನುಸಾರವಾಗಿ ಒಂದು ಪಠ್ಯವನ್ನು ಓದಿದಾಗ ಪಠ್ಯವು ಕೊಡುವ ಸೂಚನೆಗಳು

ಅತಿ ಮುಖ್ಯ. ಈ ರೀತಿಯ ಓದನ್ನು ನಿರ್ದಿಷ್ಟ ಸಂಚಿತ ಓದು ಎಂದು ಕರೆಯಬಹುದು. ಸಾಹಿತ್ಯ, ಸಮಾಜ ಚರಿತ್ರೆ, ಭಾಷಿಕ ತತ್ವಜ್ಞಾನಗಳ ಹಿನ್ನೆಲೆ ಇವುಗಳನ್ನು ಇಟ್ಟುಕೊಂಡು ಓದುವ ಕ್ರಮವು ಆದರ್ಶ ಓದುಗನಲ್ಲಿರುತ್ತದೆ. ಇದರಲ್ಲಿ ಸೌಂದರ್ಯಾತ್ಮಕ ಅನುಭೂತಿ ಹೆಚ್ಚು ಮುಖ್ಯವಾದದ್ದು ಯಾವುದೇ ಒಂದು ಪಠ್ಯವನ್ನು ಓದುತ್ತಿರುವಾಗ ಅದರ ಅರ್ಥಗಳನ್ನು ಓದುಗನು ಪುನರ್ ನಿರ್ಮಾಣ ಮಾಡುವ ಸಾಧ್ಯತೆ ಇದ್ದರೆ ಅದನ್ನು ಪುನರ್ ನಿರ್ಮಾಣ ಓದು ಎಂದು ಕರೆಯಬಹುದು. ಯಾವುದೇ ಸಾಹಿತ್ಯ ಕೃತಿಯ ರಚನೆಯ ಕ್ರಮ ಅದರ ಸಮರ್ಪಕತೆಯನ್ನು ಓದಿದರೆ ಅದನ್ನು "ಇಂಪ್ಲೈಡ್ ರೀಡಿಂಗ್" ಎಂದು ಕರೆಯಬಹುದು. ಯಾವ ಕೃತಿಯನ್ನು ಅದರ ಮೌಲ್ಯಗಳ ಜೊತೆಗೆ ಅನುಸಂಧಾನ ಮಾಡಲು ಸಾಧ್ಯವಾಗುತ್ತದೆಯೋ ಅಂತಹ ಸಂದರ್ಭದಲ್ಲಿ ಓದುಗ ಮತ್ತು ಕೃತಿಕಾರನ ಮೌಲ್ಯಗಳ ಜೊತೆಗಿನ ಅನುಸಂಧಾನದ ಕ್ರಮ ಎಂದು ಕರೆಯಬಹುದು. ಎಂ.ಎಚ್. ಎಬ್ರಮ್ಸ್ ಒಂದು ಕಲಾಕೃತಿಯ ಸನ್ನಿವೇಶದ ಕುರಿತು ಹೀಗೆ ವಿವರಿಸುತ್ತಾನೆ. 'ಜಗತ್ತು, ಕಲಾವಿದ, ಮತ್ತು ಓದುಗ ಇವುಗಳ ನಡುವೆ ನಿರ್ಣಾಯಕವಾದ ಸಂಬಂಧವಿರುತ್ತದೆ' ಎನ್ನುವುದು ಅವನ ವಾದ. ಕವಿಯು ಕವಿತೆಯಲ್ಲಿ ಅಭಿವ್ಯಕ್ತಿಸುತ್ತಾನೆ. ಆದರೆ ಓದುಗ ಅದನ್ನು ಸ್ವೀಕರಿಸುತ್ತಾನೆ. ಹೀಗಾಗಿ ಕವಿತೆಯು ಹೇಗೆ ಕಲಾವಿದನ ಕೃತಿಯಾಗಿದೆಯೋ ಹಾಗೆಯೆ ಸ್ವೀಕರಿಸುವವನ ಕೃತಿಯು ಆಗಿದೆ. ಪಠ್ಯ ಮತ್ತು ಓದುಗನಿಗೆ ನಿಕಟವಾದ ಸಂಬಂಧವಿರುತ್ತದೆಯೆಂದು ಓದುಗ ಕೇಂದ್ರಿತ ವಿಮರ್ಶೆಯು ನಂಬುತ್ತದೆ.

ಓದುಗನು ಕೃತಿಯನ್ನು ತನ್ನ ಭಾವನೆಗಳಿಗನುಸಾರವಾಗಿ ಓದುತ್ತಾನೆಯೆನ್ನುವುದು ಓದುಗ ಕೇಂದ್ರಿತ ವಿಮರ್ಶೆಯ ನಿಲುವು. ಓದುಗ ಕೇಂದ್ರಿತ ವಿಮರ್ಶೆಯು ಓದುಗನ ಮನೋಸ್ಥಿತಿಯ ಹಿನ್ನೆಲೆಯನ್ನು ಚರ್ಚಿಸುತ್ತದೆಯೆನ್ನುವುದಿಲ್ಲಿ ಉಲ್ಲೇಖನೀಯ. ಓದುಗ ಕೇಂದ್ರಿತ ವಿಮರ್ಶೆಯು ರೂಪನಿಷ್ಠ/ನವ್ಯ ವಿಮರ್ಶೆಯ ಮಾದರಿಯದಲ್ಲ ಮತ್ತು ಅದಕ್ಕಿಂತ ಭಿನ್ನವಾಗಿದೆ. ಓದುಗ ಕೇಂದ್ರಿತ ವಿಮರ್ಶೆಯು ಓದುಗನ ಒಂದು ಕೃತಿಯನ್ನು ನಿರ್ಮಾಣ ಮಾಡುವ ಪ್ರಕ್ರಿಯೆಯನ್ನು ಸೂಚಿಸುತ್ತದೆಯೆನ್ನುವುದು ಕೂಡಾ ಗಮನಾರ್ಹ. ಓದುಗ ಕೇಂದ್ರಿತ ವಿಮರ್ಶೆ ಪಠ್ಯ ಮತ್ತು ಓದಿನ ನಡುವಣ ಸಂಬಂಧಗಳನ್ನು ನಿರ್ವಚಿಸುತ್ತದೆ. ಏಕಕಾಲಕ್ಕೆ ಮತ್ತು ಭಾಷೆ, ರಚನೆ, ಓದುಗನ ಮನೋಸ್ಥಿತಿ, ತತ್ವಜ್ಞಾನ ಇತ್ಯಾದಿಗಳನ್ನು ಚರ್ಚಿಸುತ್ತದೆ. ಓದುಗರೆಂದರೆ ಒಂದೇ ವರ್ಗದವರಲ್ಲ ಎನ್ನುವುದು ಕೂಡಾ ಇಲ್ಲಿ ಉಲ್ಲೇಖನೀಯ. ಓದುಗ ಕೇಂದ್ರಿತ ವಿಮರ್ಶೆಗೆ ಫ್ರೆಂಚ್‌ನ ರಚನಾವಾದ, ಅಮೆರಿಕಾದ ಶೈಲಿಶಾಸ್ತ್ರ, ಫ್ರಾಯ್ಡ್‌ನ ಮನೋವಿಜ್ಞಾನದ ಪ್ರಭಾವಗಳಿವೆಯೆನ್ನುವುದು ಗಮನಾರ್ಹ. ಬರೆಯುವುದು ಹೇಗೆ ಸೃಜನಶೀಲವಾದ ಚಟುವಟಿಕೆಯೋ ಹಾಗೆಯೇ ಓದುವುದು ಸೃಜನಶೀಲವಾದ ಚಟುವಟಿಕೆಯಾಗಿದೆಯೆಂದು ಓದುಗ ಕೇಂದ್ರಿತ ವಿಮರ್ಶೆಯು ಪ್ರತಿಪಾದಿಸುತ್ತದೆ. ಓದುವುದು ಎಂದರೆ ಒಂದು ಪಠ್ಯದ ಜೊತೆಗೆ ನಿಜವಾದ ಸಂಬಂಧವನ್ನು ಕಟ್ಟಿಕೊಳ್ಳುವುದು ಎಂದರ್ಥವಾಗುತ್ತದೆ. ಓದುವ ಚಟುವಟಿಕೆಯು ಭಾಷೆಯ ಜೊತೆಗೆ

ಅನುಸಂಧಾನ ಮಾಡುವುದು ಮಾತ್ರವಲ್ಲ ಅದರ ಅಸೀಮವಾದ ಸಾಧ್ಯತೆಯನ್ನು ಗುರುತಿಸುವುದು ಕೂಡಾ ಆಗಿದೆ. ಓದುಗ ಕೇಂದ್ರಿತ ವಿಮರ್ಶೆಯು ಸಾಹಿತ್ಯ ಕೃತಿಯೊಂದರ ಭಾಷೆಯನ್ನು ಮಿತಿಗೊಳಿಸುವುದಿಲ್ಲ ಮಾತ್ರವಲ್ಲ ಓದುವ ಚಟುವಟಿಕೆಯು ಸೃಜನಶೀಲವೆಂದು ಪರಿಭಾವಿಸುತ್ತದೆ. ಓದುಗ ಕೇಂದ್ರಿತ ವಿಮರ್ಶೆಯು ಸಾಹಿತ್ಯ ಕೃತಿಯೊಂದರ ಭಾಷೆಯನ್ನು ಅದರ ಸೂಚನೆಗಳನ್ನು ಅದರ ಅನಿರ್ದಿಷ್ಟ ಅರ್ಥಗಳನ್ನು ಗುರುತಿಸುವುದರೊಂದಿಗೆ ಸಾಹಿತ್ಯ ಕೃತಿಯೊಂದರ ಬಹುಮುಖ ಸಾಧ್ಯತೆಗಳನ್ನು ಕುರಿತು ಹೇಳುತ್ತದೆಯೆಂಬುದಿಲ್ಲಿ ಉಲ್ಲೇಖನೀಯ. ಓದುಗ ಕೇಂದ್ರಿತ ವಿಮರ್ಶೆಯ ಪ್ರಕಾರ ಸಾಹಿತ್ಯವೆಂದರೆ ಅದು ಓದುಗನದು. ಓದುಗನಲ್ಲದೆ ಕೃತಿಯು ಪೂರ್ಣವಾಗುವುದಿಲ್ಲ. ಓದುಗ ಕೇಂದ್ರಿತ ವಿಮರ್ಶೆಯ ಪ್ರಕಾರ ಕೃತಿಯೊಂದರ ಓದಿಗೆ ಓದುಗನೇ ಜವಾಬ್ದಾರ. ಅಂದರೆ ಓದುಗನು ಓದು, ಅದರ ಅರ್ಥವಂತಿಕೆಯ ಸಂದರ್ಭದಲ್ಲಿ ಬರಿಯ ಲೇಖಕನನ್ನು ಬೈದರೆ ಉಪಯೋಗವಿಲ್ಲ. ತನ್ನ ಮಿತಿಯು ಓದುಗನಿಗೆ ಗೊತ್ತಿರಬೇಕು.

ಸ್ಟ್ಯಾನ್ಲಿಫಿಶ್ ಹೇಳುವಂತೆ, 'ಯಾವಾಗಲೂ ಒಂದು ಕೃತಿಗೆ ಮತ್ತು ಓದುಗನಿಗೆ ಇರುವ ಸಂಬಂಧವು ಸಾಂಪ್ರದಾಯಿಕವಾದುದಲ್ಲ.' ಪ್ರತಿಯೊಂದು ಬಾರಿ ಓದುವಾಗಲೂ ವಿಶೇಷ ಅರ್ಥಗಳನ್ನು ಹೊಳೆಯಿಸುವಂತಿದ್ದರೆ ಅದು ಮಹತ್ವದ ಕೃತಿಯಾಗಿರುತ್ತದೆ. ಫಿಶ್ ಹೇಳುವಂತೆ, 'ಸಾಹಿತ್ಯ ಕೃತಿ ಎನ್ನುವುದು ವಿಶ್ವಾತ್ಮಕವಾದ ಪರಿಕಲ್ಪನೆಯನ್ನು ಒಳಗೊಂಡಿದೆ.' ಅವನು ಹೇಳುವಂತೆ, 'ಯಾವುದೇ ಸಾಹಿತ್ಯಿಕ ಕೃತಿಯನ್ನು ಅದು ಬರೆದ ಸಂದರ್ಭದ ಹಿನ್ನೆಲೆಯಲ್ಲಿ ಓದಬೇಕಾಗಿಲ್ಲ.' ಇದು ಮೂಲತಃ ಮನೋವೈಜ್ಞಾನಿಕ, ಮಾರ್ಕ್ಸವಾದಿ ವಿಮರ್ಶೆಯ ವಿರೋಧವೂ ಆಗಿರುತ್ತದೆ. ಪ್ರತಿಯೊಂದು ಓದು ಕೂಡ ತನ್ನದೆಯಾದ ಸಂದರ್ಭವನ್ನು ನಿರ್ಮಾಣ ಮಾಡಿಕೊಂಡಿರುತ್ತದೆ.

## ಮನೋವಿಜ್ಞಾನದ ಪರಿಕರಗಳು ಮತ್ತು ಓದು

ಸಾಹಿತ್ಯ ಕೃತಿಯೊಂದರ ನಿರ್ಮಾಣದಲ್ಲಿ ಕೃತಿಕಾರನ ಮನಸ್ಸು ಯಾವ ರೀತಿಯಲ್ಲಿ ವರ್ತಿಸುತ್ತದೆ ಎಂಬುದನ್ನು ಫ್ರಾಯ್ಡ್‌ನಂತಹ ಮನೋವಿಜ್ಞಾನಿಗಳು ಚರ್ಚಿಸಿದ್ದಾರೆ. ಪ್ರತಿಯೊಂದು ಸಾಹಿತ್ಯ ವಿಮರ್ಶೆಯು ಮನೋವೈಜ್ಞಾನಿಕ ವಿಮರ್ಶೆಯ ಪರಿಕರಗಳನ್ನು ಬಳಸಿಕೊಳ್ಳಲು ಪ್ರಾರಂಭಿಸಿದಾಗ ಅದು ಮನುಷ್ಯನ ಮನೋಸ್ಥಿತಿಯ ಬಗ್ಗೆ ಮಾತನಾಡಲು ಪ್ರಾರಂಭಿಸಿತು. ಹೀಗಾಗಿ ಮನೋವೈಜ್ಞಾನಿಕ ವಿಮರ್ಶೆಯು ಸಾಹಿತ್ಯ ಮತ್ತು ಮನಸ್ಸುಗಳ ನಡುವಿನ ಸಂಬಂಧವನ್ನು ನಿರ್ವಹಿಸುತ್ತದೆ. ಆದರೆ ಯಾವುದೇ ಮನೋವೈಜ್ಞಾನಿಕ ಪರಿಕರಗಳನ್ನು ಇಟ್ಟುಕೊಂಡು ಸಾಹಿತ್ಯ ವಿಮರ್ಶೆಯನ್ನು ಮಾಡಲು ಹೊರಡುತ್ತೇವೆಯೋ ಆಗ ಅದು ಕೃತಿ ಮತ್ತು ಓದುಗನ ಮನಸ್ಥಿತಿಯ ಸಂದರ್ಭಗಳು ಅತ್ಯಗತ್ಯವಾಗಿರುತ್ತವೆ.

ಓದುಗ ಕೇಂದ್ರಿತ ವಿಮರ್ಶೆಯು ಅಂತಿಮವಾಗಿ ಓದುಗನ ಮನೋಸ್ಥಿತಿಯ ಚರ್ಚೆಯೂ ಹೌದು. ಓದುಗ ಕೇಂದ್ರಿತ ವಿಮರ್ಶೆಯ ಮೇಲೆ ಜಾಕೋಸ್ ಲಕಾನ್

ಎಂಬ ಮನೋವಿಜ್ಞಾನಿಯ ಪ್ರಭಾವವಿದೆ. ಜಾಕೋಸ್ ಲಕಾನ್ ಫ್ರಾಯ್ಡ್‌ನ ವಾದವನ್ನು ಸಂಪೂರ್ಣವಾಗಿ ಒಪ್ಪುವುದಿಲ್ಲವೆಂಬುದು ಗಮನಾರ್ಹ. ಲಕಾನ್ ವಾದವನ್ನು ಚರ್ಚಿಸುವ ಸಂದರ್ಭದಲ್ಲಿ ಫಿಲ್‌ಮಾರ್ ಹೀಗೆ ಹೇಳುತ್ತಾನೆ. "ಸಾಹಿತ್ಯದ ವಿಶ್ಲೇಷಣೆ ಮನೋವೈಜ್ಞಾನಿಕ ಪರಿಕರದ ಅನುಸಂಧಾನ ಇವು ಅಂತಿಮವಾಗಿ ಓದುಗನ ಮನಃಸ್ಥಿತಿಯನ್ನು ಅವಲಂಬಿಸಬೇಕಾದುದು ಅನಿವಾರ್ಯ." ಸೃಜನಶೀಲತೆಗೆ; ಲೇಖಕನ ಸುಪ್ತಪ್ರಜ್ಞೆಗೆ ಬಯಕೆಗಳು ಕಾರಣ ಎಂದು ಫ್ರಾಯ್ಡ್ ಹೇಳಿದರೆ ಲಕಾನ್ ಓದುಗರ ಸುಪ್ತಪ್ರಜ್ಞೆಯ ಕಾರಣಗಳಿಂದಲೆ ಒಂದೊಂದು ಕೃತಿಯು ಒಂದೊಂದು ಅರ್ಥವನ್ನು ಕೊಡುತ್ತದೆ ಎಂದು ಹೇಳುತ್ತಾನೆ. ಹಾಗೂ ಒಂದೊಂದು ಕೃತಿಯ ಒಬ್ಬೊಬ್ಬ ಓದುಗನಲ್ಲಿ ಒಂದೊಂದು ರೀತಿಯ ಪ್ರಭಾವವನ್ನು ಬೀರುತ್ತದೆ. ಹೀಗಾಗಿ ಕೃತಿಯೊಂದನ್ನು ಒಬ್ಬ ಓದುಗ ಓದುವಾಗ ಅವನ ಸಾಹಿತ್ಯಿಕ ಪರಂಪರೆಗಳು ಕೂಡ ಬಹಳ ಮುಖ್ಯವಾದದ್ದಾಗಿರುತ್ತದೆ. ಅಂದರೆ ಸತ್ಯಕ್ಕೆ ಒಂದೇ ಮುಖವಿಲ್ಲ. ಅದಕ್ಕೂ ಅನೇಕ ಮುಖಗಳಿವೆ. ಸಾಹಿತ್ಯಿಕ ಸಂವಾದಗಳ ಚರ್ಚೆಯ ಸಂದರ್ಭದಲ್ಲಿ ಕವಿಯನ್ನು ಕೇಂದ್ರವಾಗಿರಿಸಿಕೊಂಡು ಒಂದು ಕೃತಿಯನ್ನು ಕೇಂದ್ರವಾಗಿರಿಸಿಕೊಂಡು ಚರ್ಚಿಸುವುದಕ್ಕಿಂತ ಹೆಚ್ಚು ಓದುಗನನ್ನು ಕೇಂದ್ರವಾಗಿರಿಸಿಕೊಂಡು ಓದುವುದು ಹೆಚ್ಚು ಉಪಯುಕ್ತವೆಂಬುದನ್ನು ಓದುಗ ಕೇಂದ್ರಿತ ವಿಮರ್ಶೆಯು ಹೇಳುತ್ತದೆ. ಸೃಜನಶೀಲವಾದ ಬರವಣಿಗೆಗೆ ಹೇಗೆ ವಾಸ್ತವದ ನಿಜವಾದ ಸಂಬಂಧವಿರುವುದಿಲ್ಲವೋ ಅದೇ ರೀತಿಯಲ್ಲಿ ಓದಿನ ಪ್ರಕ್ರಿಯೆಗೂ ಕೂಡಾ ಭಿನ್ನವಾದುದೇ ಆಗಿರುತ್ತದೆ. ಓದುವುದು ಎಂದರೆ ಒಂದು ನಿರ್ದಿಷ್ಟವಾದ ಕನಸನ್ನು ಕಾಣುವುದು ಎಂದರ್ಥವೆಂಬಷ್ಟರ ಮಟ್ಟಿಗೆ ಇದರ ಚರ್ಚೆಯಿದೆ. ಓದುವುದು ಎಂದರೆ ಒಂದು ನಿರ್ದಿಷ್ಟ ಬಗೆಯ ಅಹಂಕಾರವನ್ನು ತೃಪ್ತಿಪಡಿಸಿಕೊಳ್ಳುವುದೂ ಹೌದು. ಹಾಗೆಯೇ ಓದುವುದು ಎನ್ನುವುದು ಒಂದು ಮಾನಸಿಕ ಚಿಂತನೆಯೂ ಹೌದು. ಎಲ್ಲರೂ ತಮ್ಮ ತಮ್ಮ ಮನೋಸ್ಥಿತಿಗೆ ಅನುಗುಣವಾಗಿ ಕೃತಿಯನ್ನು ಓದುತ್ತಾರೆಯೆಂಬುದು ಓದುಗ ಕೇಂದ್ರಿತ ವಿಮರ್ಶೆಯ ನಿಲುವಾಗಿದೆ. ಪ್ರತಿಯೊಬ್ಬರು ತಮ್ಮ ಮನೋಸ್ಥಿತಿಗೆ ಅನುಸಾರವಾಗಿ ಕೃತಿಯನ್ನು ಅರ್ಥಮಾಡಿಕೊಳ್ಳುತ್ತಾರೆ. ಕಲ್ಪಿಸಿಕೊಳ್ಳುತ್ತಾರೆಯೆಂದು ಓದುಗ ಕೇಂದ್ರಿತ ವಿಮರ್ಶೆಯು ಹಾಲೆಂಡ್‌ನ ಪ್ರಕಾರ, 'ಓದುವಾಗ ಕೃತಿಯು ಓದುಗನ ಮನೋಸ್ಥಿತಿಗೆ ಅನುಗುಣವಾಗಿ ಪಲ್ಲಟಗೊಳ್ಳುತ್ತದೆ'. ಓದುವ ಕ್ರಮ ಮತ್ತು ಪಠ್ಯದ ಜೊತೆಗೆ ಸಂಬಂಧವನ್ನು ಸಾಧಿಸಿಕೊಳ್ಳುವ ಕ್ರಮ ಬೇರೆ ಬೇರೆ ರೀತಿಯದಾಗಿರಬಹುದು– ಒಂದು ಕೃತಿಯನ್ನು ಓದುವಾಗ ಓದುಗನಿಗೆ ಅದು ಭಯವನ್ನುಹುಟ್ಟಿಸಲು ಸಾಧ್ಯ ಅದೇ ಕೃತಿಯು ಮತ್ತೊಬ್ಬನಿಗೆ ಖುಷಿಯನ್ನು ಕೊಡಲು ಸಾಧ್ಯಯೆಂಬುದು ಇದರ ಭಾವಾರ್ಥ. ಪ್ರತಿಯೊಂದು ಓದು ಕೂಡಾ "ಆನಂದದ ತತ್ವ"ವನ್ನು [Principle Pleasure] ಒಳಗೊಂಡಿರುತ್ತದೆ. ಯಾವುದೇ ಕೃತಿಯು ಯಾವುದೇ ಬಗೆಯ ಸಂತೋಷವನ್ನು ಕೊಡದಿದ್ದರೆ ಅಂತಹ ಕೃತಿಯನ್ನು ಓದುವುದು ಕಷ್ಟವೆಂದು ಈ ಪಂಥವು ಪ್ರತಿಪಾದಿಸುತ್ತದೆ. ಒಂದು ಕೃತಿಯನ್ನು ಅರ್ಥಮಾಡಿಕೊಳ್ಳುವುದು

ಎಂದರೆ ನಿಜವಾದ ಸಂತೋಷವನ್ನು ಪಡೆಯುವುದು ಎಂದರ್ಥ. ಹಾಲೆಂಡ್ ಹೇಳುವ ಹಾಗೆ ಪ್ರತಿಯೊಂದು ಬರವಣಿಗೆಯು ಕೂಡ ಒಂದು ಬಿಳಿಯ ಹಾಳೆಯ ಮೇಲೆ ಕಪ್ಪು ಗುರುತಿಸುವುದು ಎಂದರ್ಥ. ಈ ಗುರುತುಗಳನ್ನು ಒಬ್ಬ ಓದುಗ ತನ್ನ ವೈಯಕ್ತಿಕ ಗುಣಕ್ಕೆ ಅನುಸಾರವಾಗಿ ಅರ್ಥಮಾಡಿಕೊಳ್ಳುತ್ತಾನೆ. ಹೀಗಾಗಿ ಯಾವುದೇ ಸಂದರ್ಭದಲ್ಲಿ ಪಠ್ಯ ಎನ್ನುವುದು ಓದುಗನಲ್ಲಿ ಜೀವ ತಳೆಯುವ ಪ್ರಕ್ರಿಯೆಯಾಗಿದೆ. ಹಾಲೆಂಡ್ ಮತ್ತು ಲಕಾನ್ ವಿಶ್ಲೇಷಣೆಯನ್ನು ಆಧರಿಸಿಕೊಂಡು ಹೇಳುವುದಿದ್ದರೆ 'ಒಂದು ಕಥೆಯನ್ನು ಓದಿದರೆ ಆ ಕಥೆಯನ್ನು ಪ್ರತಿಯೊಬ್ಬರು ತನ್ನ ವಯಸ್ಸು, ಅನುಭವ ಇತ್ಯಾದಿಗಳಿಗೆ ಅನುಸಾರವಾಗಿ ಬೇರೆ ಬೇರೆ ತರಹ ಓದುತ್ತಿರುತ್ತಾರೆ.' ಪ್ರತಿಯೊಂದು ಮನೋವೈಜ್ಞಾನಿಕ ಸಿದ್ಧಾಂತದ ಹಿನ್ನೆಲೆಯಿಂದ ಚರ್ಚಿಸುವುದೇ ಓದು. ಮನಸ್ಸಿನ ಸುಪ್ತಪ್ರಜ್ಞೆಯ ಮೇಲೆ ದಟ್ಟವಾದ ಪ್ರಭಾವವನ್ನು ಬೀರುತ್ತದೆ.

ಪ್ರತಿಯೊಂದು ಓದು ಕೂಡ ಓದುವ ಸಂದರ್ಭದಲ್ಲಿ ಓದುಗನದೇ ಆಗಿರುತ್ತದೆ ಆದುದರಿಂದ ತನ್ನ ಸ್ವಂತದ ಮೂಲಕವೇ ಕೃತಿಗೆ ಅನುಸಂಧಾನ ಮಾಡುತ್ತಾನೆ. ಓದು–ಪರೀಕ್ಷೆಯ ಓದು, ಅಭಿಮಾನದ ಓದು, ಕಾಲಹರಣದ ಓದು, ವಿಮರ್ಶೆಯ ಓದು ತುಂಬಾ ವ್ಯತ್ಯಾಸದಿಂದ ಕೂಡಿರುವಂತಹದ್ದು. ಇಂತಹ ಆಲೋಚನಾ ಕ್ರಮ ರೂಪಿಸಿದರು. ಮಧ್ಯಮ ವರ್ಗದ ಅಧ್ಯಾಪಕ ವೃಂದದವರು ಸಾಹಿತ್ಯ ಕೃತಿಯನ್ನು ಸಾಹಿತ್ಯ ಕೃತಿಯಾಗಿಯೇ ನೋಡಬೇಕೇ ವಿನಃ ಬೇರೆ ರೀತಿಯಲ್ಲಿ ಅಲ್ಲ ಎಂದರು. ಆದರೆ ಓದುವುದು ಎಂದರೆ ಹೀಗೆಯೇ ಇರಬೇಕೆಂಬ ನೀತಿಸಂಹಿತೆಯನ್ನು ವಿರೋಧಿಸುವುದು ಕೂಡಾ ಹೌದು. ಮಧ್ಯಮವರ್ಗದ ಮತ್ತು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ವರ್ಗದ ಓದು ಮಾತ್ರ ನಿಕಟ ಓದು. ಆದರೆ ಕೆಳವರ್ಗದ ಸ್ತ್ರಿಯರು ಇತರೆ ವರ್ಗದವರು ಓದುವ ಓದು ಯಾಕೆ ಸೂಕ್ಷ್ಮ ಓದಲ್ಲ ಎಂದು ಈ ಪಂಥದವರು ವಾದಿಸುತ್ತಾರೆ. ಇದೊಂದು ರಾಜಕೀಯ ಎಂದೂ ತಿಳಿಯುತ್ತಾರೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವಿದೆ: ಇಂಗ್ಲೀಷ್ ಸಾಹಿತ್ಯ ವಿಮರ್ಶೆಯಲ್ಲಿ ೧೯೧೦–೧೯೬೦ರವರೆಗಿನ ಕಾಲವನ್ನು ನವ್ಯ ಸಾಹಿತ್ಯದ; ನವ್ಯ ವಿಮರ್ಶೆಯ ಕಾಲವೆಂದು ಕರೆಯಲಾಯಿತು. ನವ್ಯ ವಿಮರ್ಶೆಯ ಪ್ರಮುಖ ಲಕ್ಷಣವೆಂದರೆ ವಿಮರ್ಶೆ ಎನ್ನುವುದು 'ಪಠ್ಯಕೇಂದ್ರಿತ' ಎಂದು ಭಾವಿಸಿದ್ದು ಮತ್ತು ಒಂದು ವಿಶಿಷ್ಟವಾದ ಓದುಗ ವರ್ಗವನ್ನು ನಿರ್ಮಿಸಿದ್ದು (ಕಲ್ಪಿಸಿದ್ದು) ಇಲ್ಲಿ "ವಿಶಿಷ್ಟ ಓದುಗ" ಎಂದರೆ ವಿದ್ಯಾವಂತ, ಸಾಹಿತ್ಯ ಓದಿದ ಮಧ್ಯಮವರ್ಗದ ಓದುಗರೆಂದು ಅರ್ಥ. ಹಾಗೆಯೇ ನವ್ಯರು ರೂಪಿಸಿದ ಇನ್ನೊಂದು ವೈಚಾರಿಕ ನಿಲುವೆಂದರೆ "ಯಾವುದೇ ಒಂದು ಕೃತಿಯನ್ನು ಒಂದು ಓದು ಅಥವಾ ಸಾಮಾನ್ಯ ಓದಿನಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಇದಕ್ಕೆ ಹಲವಾರು ಬಾರಿ ಓದಬೇಕು ಮತ್ತು ಸೂಕ್ಷ್ಮವಾಗಿ ಓದಬೇಕೆಂಬ ಕಲ್ಪನೆ" ಇದನ್ನೇ ನವ್ಯ ವಿಮರ್ಶಕರು ನಿಕಟ ಓದು ಎಂದು ಕರೆದರು. ಇದನ್ನೇ ಐ.ಎ.ರಿಚರ್ಡ್ಸ್–"ಪ್ರಾಕ್ಟಿಕಲ್ ಕ್ರಿಟಿಸಿಸಂ" ಎಂದು ಕರೆದದ್ದು. ಇದರ ಪ್ರಕಾರ ಒಂದು ಪಠ್ಯ

ಅರ್ಥಮಾಡಿಕೊಳ್ಳಬೇಕಾದರೆ ಅದರ ಅರ್ಥ ತಿಳಿದರೆ ಸಾಕಾಗುವುದಿಲ್ಲ. ಅಲ್ಲಿ ಪ್ರತಿಯೊಂದು ಶಬ್ದ: ಅದರ ಅರ್ಥ: ಛಂದಸ್ಸಿನ ಸೂಕ್ಷ್ಮ, ಒಂದು ಪದ ನೀಡಬಹುದಾದ ಹಲವು ಅರ್ಥಗಳನ್ನು ಗಮನಿಸಬೇಕಾಗುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡು ಐ.ಎ.ರಿಚರ್ಡ್ಸ್, ಕ್ಯಾಂಬಿಡ್ಜ್ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದಾಗ ಕೆಲವು ಪದ್ಯಗಳನ್ನು ಕವಿಗಳ ಹೆಸರು ನಮೂದಿಸದೆ ವಿದ್ಯಾರ್ಥಿಗಳಿಗೆ ಕೊಟ್ಟದ್ದು ಬರವಣಿಗೆಯ ಅರ್ಥದಿಂದ ಒಂದು ಕವಿತೆಯನ್ನು ಹೇಗೆ ಓದಬಹುದು ಎಂದು ಪ್ರಾಯೋಗಿಕ ವಿಮರ್ಶೆ ಹೇಳುತ್ತದೆ. ಇದರಿಂದ ನಮಗೆ ತಿಳಿದು ಬರುವ ಅಂಶವೆಂದರೆ ಒಂದು ಪದ್ಯವನ್ನು ಅರ್ಥಮಾಡಿಕೊಳ್ಳಲು ಒಂದು ನಿರ್ದಿಷ್ಟವಾದ ಯೋಗ್ಯತೆ ಇರಬೇಕು 'ಸಾಹಿತ್ಯಿಕ ಪಠ್ಯ' ಎನ್ನುವುದು ಇತರೆ ಪಠ್ಯಗಳಿಗಿಂತ ಭಿನ್ನವಾದದ್ದು ಎಂಬ ಅಭಿಪ್ರಾಯ. ಕೆಲವರು ಕೆಲವು ಸಾಹಿತ್ಯ ಕೃತಿಗಳನ್ನು ಕೆಲವು ದಶಕಗಳಿಂದ ಮೆಚ್ಚುತ್ತಲೇ ಬಂದಿದ್ದಾರೆ. ಆದರೆ ಅದು ಯಾವ ಕಾರಣದಿಂದ ಮೆಚ್ಚುಗೆ ಪಡೆದಿದೆ ಎಂಬುದು ಬೇರೆ ಬೇರೆಯಾಗಿರಬಹುದು. ಇದು ಕೃತಿ ಕೇಂದ್ರಿತವಲ್ಲ. ಓದುಗ ಕೇಂದ್ರಿತವಾದುದು. ಐ.ಎ. ರಿಚರ್ಡ್ಸ್ ಪ್ರಾಯೋಗಿಕ ವಿಮರ್ಶೆಯ ಮೇಲೆ ಆ ಕಾಲದ ವೈಚಾರಿಕ ಮೌಲ್ಯದ ಪ್ರಭಾವವಿದೆ. ಅದು ಸಫಲತೆಯನ್ನು ಕಂಡುಕೊಂಡಿತು. ಇವನಿಗಿಂತ ಮುಂಚೆ ಅನೇಕರು ಆ ಕೃತಿಗಳ ಓದು ಹಲವು ರೀತಿಯಲ್ಲಿ ಕಾಲಕ್ಕೆ ತಕ್ಕಂತೆ ನಡೆದು ಹೋಗಿತ್ತು. ಆದರೆ ಅಂದು ಮುಖ್ಯವಾದ ಕೃತಿ ಇಂದು ಉತ್ತಮವಾಗಿ ಕಾಣಬೇಕಾದರೆ ಅಂದು ಅದರ ಒಳ ಅಂಶಗಳು ಎಲ್ಲಿ ಹೋಗಿದ್ದವು ಎಂದು ಓದುಗ ಕೇಂದ್ರಿತ ವಿಮರ್ಶೆಯು ಪ್ರಶ್ನಿಸುತ್ತದೆ. ಸಾಹಿತ್ಯ ಕ್ಷೇತ್ರದಲ್ಲಿ ಅನೇಕ ಕೃತಿಗಳು ಶ್ರೇಷ್ಠವೆಂದು ಶತಮಾನದಿಂದ ಪರಿಗಣಿತವಾಗಿದೆ. ಆದರೆ ಯಾವ ಆಧಾರದ ಮೇಲೆ ಆ ಕೃತಿ ಶ್ರೇಷ್ಠ ಎಂದು ನಿರ್ಧರಿಸಿದರೋ ಅದು ಮುಂದಿನ ಕಾಲಕ್ಕೆ ಶ್ರೇಷ್ಠವಾಗದಿರಬಹುದು. ಅವರು ಕೊಡುವ ಮೌಲ್ಯಗಳು ಮಹತ್ವ ಏನು ಎಂಬುದರ ಬಗ್ಗೆ ಭಿನ್ನ ಕಲ್ಪನೆಗಳಿರುತ್ತವೆ. ಆದ್ದರಿಂದ ಒಂದು ಪಠ್ಯ ಹಲವು ದಶಕಗಳಿಂದ ಮಹತ್ವ ಪೂರ್ಣವೆಂದು ಪರಿಗಣಿಸಿದ್ದರೂ ಕೂಡಾ ಆ ಪಠ್ಯದ ಆಂತರಿಕ ಸ್ವರೂಪ/ಅದರ ಭಾಷೆ ಇವುಗಳ ಮೇಲೆ ಮಾತ್ರ ಅವಲಂಬಿತವಾಗಿರುವುದಿಲ್ಲ. ಕಾಲದಿಂದ ಕಾಲಕ್ಕೆ ಬದಲಾದ ಆಲೋಚನಾ ಕ್ರಮಗಳು, ಐತಿಹಾಸಿಕ ಒತ್ತಡಗಳು, ಅಭಿರುಚಿಗಳು ಇದೆಲ್ಲವೂ ಆಯಾ ಕಾಲದ ಓದುಗರ ಮೌಲ್ಯವನ್ನು ಪ್ರಭಾವಗೊಳಿಸಿದ ಸಂಗತಿಗಳಾಗಿದೆ. ಒಂದೊಂದು ಕಾಲಾವಧಿಯ ಓದುಗರು ಒಂದೊಂದು ಮೌಲ್ಯವನ್ನು ಮುಖ್ಯವೆಂದು ಬಗೆದಿರುತ್ತಾರೆ.

ಈ ದೃಷ್ಟಿಯಿಂದ ಇಲ್ಲಿ 'ಶುದ್ಧ ಸಾಹಿತ್ಯ ವಿಮರ್ಶೆ ಅಸಾಧ್ಯ' ಎಂಬುದನ್ನು ಗಮನಸಬೇಕು. ಯಾವುದೇ ಒಂದು ಕೃತಿ ಶ್ರೇಷ್ಠ ಎಂದರೆ ಅದು ಪೂರ್ಣ ಸತ್ಯವಲ್ಲ. ಒಂದು ಕಾಲದಲ್ಲಿ ಶ್ರೇಷ್ಠ ಕೃತಿ ಎಂದು ಬಗೆದದ್ದು ಇಂದು ಕನಿಷ್ಠವಾಗಬಹುದು. ಇದರೊಂದಿಗೆ ಸಾಹಿತ್ಯ ವಿಮರ್ಶೆಯಲ್ಲಿ ಬಂದಿರುವ 'ಕೃತಿ ಮೌಲ್ಯ'ದ ಸಂಗತಿಯು

ಕೂಡಾ ಗಮನಾರ್ಹವಾಗಿದೆ. ಮೌಲ್ಯವೆಂಬುದು ಕೇವಲ ಒಳಗಿರುವುದಿಲ್ಲ. ಅದನ್ನು ಹೊರಗಿನಿಂದಲೂ ಗುರುತಿಸಬೇಕು.

ನವ್ಯರು ಕೃತಿಯೊಂದನ್ನು ಒಳಗಿನಿಂದ ನೋಡಿದ್ದು-ಒಂದು ಭಾಗವನ್ನು ಮಾತ್ರ. ಆದ್ದರಿಂದ ಅದು ಅರ್ಧಸತ್ಯ, ಒಂದು ಕೃತಿ ಶ್ರೇಷ್ಠವಾದಾಗಲೂ ಆ ಕೃತಿಯ ಜೊತೆಗೆ ಕೃತಿಕಾರ, ಸಂದರ್ಭ, ಕಾಲ, ಮತ್ತು ಓದುಗರ ಅಂಶ ಮುಖ್ಯವಾಗಿರುತ್ತದೆ. ಒಂದು ಕಾಲಕ್ಕೆ ಪ್ರಾಯೋಗಿಕ ವಿಮರ್ಶೆಯಲ್ಲಿ ತುಂಬಾ ಪ್ರಮುಖವಾದ ಕೃತಿ ಎಂದು ಪರಿಗಣಿಸಿದವುಗಳು ಇಂದಿನ ಕಾಲಕ್ಕೆ ಪ್ರಮುಖವಾಗಿರುವುದಿಲ್ಲ. ಪ್ರಾಯೋಗಿಕ ವಿಮರ್ಶೆ ಇದರ ಆಲೋಚನೆಗೆ ಕಾರಣ ತಮ್ಮ ಕಾಲದ ವೈಚಾರಿಕ ನೆಲೆ ಎಂದು ಯೋಚಿಸಲಾರರು. ಕೃತಿನಿಷ್ಠ ವಿಮರ್ಶೆಗೂ ಪರಿಮಿತಿಗಳಿವೆ. ಇದಕ್ಕೆ ಓದುಗರು ಮುಖ್ಯ. ಒಂದು ಸಾಹಿತ್ಯ ಕೃತಿ ಎಂದು ಏನು ಹೇಳುತ್ತದೆ ಎನ್ನುವುದಕ್ಕಿಂತ ಹೇಗೆ ಹೇಳುತ್ತದೆ. ಎಂಬುದು ಮುಖ್ಯ. ಒಂದು ಕೃತಿಯನ್ನು ಕೈಚಳಕ; ಅದ್ಭುತ ಕಲೆ ಎಂದು ತಿಳಿಯದೇ ಓದುವ ಮೂಲಕ ಅದರ ಮೌಲ್ಯ ಕಂಡುಕೊಳ್ಳುತ್ತೇವೆ. ಹಾಗೆಯೇ ಪ್ರಾಯೋಗಿಕ ವಿಮರ್ಶೆಯ ವಿಧಾನದ ಕುರಿತು ಭಿನ್ನ ಅಭಿಪ್ರಾಯಗಳಿವೆ.

'ಪ್ರಾಕ್ಟಿಕಲ್‌ಕ್ರಿಟಿಸಿಸಂ' ಒಂದು ಸೀಮಿತವಾದ ತರಗತಿಯ ಕೋಣೆಯಲ್ಲಿ ರೂಪಿತವಾದದ್ದು. ಭಾಷೆ ಎಂಬುದು ಸಂದರ್ಭಕ್ಕೆ ತಕ್ಕಂತೆ ರೂಪಗೊಂಡಿರುತ್ತದೆಯೇ ಹೊರತು ಅದೇ ಮುಖ್ಯವಲ್ಲ. ಭಾಷೆಗಿಂತ ಮೊದಲು ಅನುಭವವಿತ್ತು. ಭಾಷೆ ಎಂಬುದು ಬೇರೊಂದನ್ನು ಆಧರಿಸುತ್ತದೆ. ಜಗತ್ತನ್ನು ಅರ್ಥಮಾಡಿಕೊಳ್ಳುವ ರೀತಿ ಬೇರೆಯಾಗಿದೆ. ಭಾಷೆ ಇರುವ ವಸ್ತುಗಳಿಗೆ ಸಾಂಕೇತಿಕ ರೂಪಕೊಡುತ್ತದೆ. ಅಥವಾ ವರ್ಣಿಸುತ್ತದೆ. (ಮರ, ಗಿಡ, ಗುಡ್ಡ, ಬೆಟ್ಟ ಮುಂತಾದವು) ಭಾಷೆ ಜೀವನವನ್ನು ರೂಪಿಸುವುದಿಲ್ಲ. ಸಾಹಿತ್ಯ ವಾಸ್ತವಿಕ/ಕಾಲ್ಪನಿಕ ಅನುಭವಗಳನ್ನು ವ್ಯಕ್ತಪಡಿಸಬಹುದು. ಆದ್ದರಿಂದ ಅದು ವಾಸ್ತವಾನುಭವದ ಹಿನ್ನೆಲೆಯಲ್ಲಿಯೇ ಇರುತ್ತದೆ. ಆದರೆ ಅವು ಪೂರ್ಣವಾಗಿ ವಾಸ್ತವವಲ್ಲ ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು. ಒಂದು ಸಾಹಿತ್ಯ ಕೃತಿ ಅನುಭವಕ್ಕೆ ಪ್ರಮಾಣವಾಗಿದೆಯೆ, ಎಂದು ಮೌಲ್ಯಮಾಪನ ಮಾಡಬೇಕು. ಸಾಹಿತ್ಯ ಕೃತಿಯ ಅಂತರಂಗ ಪರಿಗಣಿಸಬೇಕೋ, ಬಾಹ್ಯಪ್ರೇರಣೆ ಗಮನಿಸಬೇಕೋ? ಎಂಬ ಪ್ರಶ್ನೆ ಅದರ ಒಳಗಿನ ಅಂಶಗಳಿಂದಲೇ ರೂಪುಗೊಳ್ಳುತ್ತದೆ. ಅದನ್ನೇ ನೋಡಬೇಕೆಂಬುದೇ ನವ್ಯ ವಿಮರ್ಶಕರ ಮೂಲವಾದ. ಒಂದು ಕೃತಿಯ ಅರ್ಥವನ್ನು ಆ ಕೃತಿಯ ಒಳಗೆ ಹುಡುಕಬೇಕು ವಿಮರ್ಶಕನಿಗೆ ಎಂದರೆ ಆ ಕೃತಿಯಲ್ಲಿ ಬಳಸಿರುವ ಪದಗಳನ್ನು ಕಾಲದಿಂದ ಕಾಲಕ್ಕೆ ಬದಲಾಗಿರುವ ರೀತಿ ತಿಳಿದಿರಬೇಕು. ಜೊತೆಗೆ ಸಾಹಿತ್ಯಿಕ ಪರಂಪರೆಯನ್ನು ತಿಳಿದಿರಬೇಕು. ಅಷ್ಟೇ ಅಲ್ಲದೆ ಕೃತಿಯು ಏನನ್ನು ತಿಳಿಸುತ್ತದೆ. ಒಬ್ಬ ಲೇಖಕ ಇನ್ನೊಬ್ಬನಿಗೆ ಯಾವ ರೀತಿಯ ಮಾದರಿಯಲ್ಲಿ ತಿಳಿಸುತ್ತಾನೆ. ಅವನ ಬರವಣಿಗೆಯು ಅಧಿಕೃತವೇ ಅನಧಿಕೃತವೇ? ಆ ಲೇಖಕನ ಮೊದಲ ಬರವಣಿಗೆಯೇ? ಅನುಭವವುಳ್ಳ ಬರವಣಿಗೆಯೇ ಅಲ್ಲವೇ

ಎಂದು ತಿಳಿಯುವುದು ಮುಖ್ಯವಾಗಿರುತ್ತದೆ. ಅದೇ ರೀತಿ ಯಾವುದೇ ಒಂದು ಕೃತಿಯು ಶ್ರೇಷ್ಠವಾದದ್ದು ಸಾರ್ವಕಾಲಿಕವಾದುದೆಂದು ಹೇಳುವಾಗಲೂ ಆ ಕೃತಿಯ ಶ್ರೇಷ್ಠತೆಯನ್ನು ಬೇರೆ ಬೇರೆ ಕಾಲದಲ್ಲಿ ಓದುಗರು ಭಿನ್ನವಾದ ರೀತಿಯಲ್ಲಿ ಗ್ರಹಿಸುತ್ತಾರೆ. ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು. ಶ್ರೇಷ್ಠತೆಯ ಕಲ್ಪನೆ ಎಲ್ಲಾ ಕಾಲಕ್ಕೂ ಒಂದೇ ಇರುವುದಿಲ್ಲ. ಆ ಕಾಲದ ಓದುಗರು ತಮಗೆ ತೋರಿದ ಶ್ರೇಷ್ಠತೆಯ ಕಲ್ಪನೆ ಹೊಂದಿರುತ್ತಾರೆ ಅಷ್ಟೇ ಪರಿಸ್ಥಿತಿ ಹೀಗಿರುವಾಗ ಐ.ಎ.ರಿಚರ್ಡ್ಸ್‌ನ ತಮ್ಮ ಪ್ರಾಯೋಗಿಕ ವಿಮರ್ಶೆಯಲ್ಲಿ ಶ್ರೇಷ್ಠತೆಯ ಕಲ್ಪನೆಯನ್ನು ಹೇಗೆ ರೂಪಿಸಿದ ಎನ್ನುವುದು ಬೇರೆ ಪ್ರಶ್ನೆ.. ವಾಸ್ತವವಾಗಿ ಅದು ೧೯೩೦-೪೦ ರಲ್ಲಿ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದಲ್ಲಿದ್ದ ವಿದ್ಯಾವಂತರಾದ ಇಂಗ್ಲೀಷ್ ಸಾಹಿತ್ಯ ವಿದ್ಯಾರ್ಥಿಗಳ ಮಧ್ಯಮ ವರ್ಗದ ಜನರ ಶ್ರೇಷ್ಠತೆಯ ಕಲ್ಪನೆ ಮಾತ್ರ ಆಗಿತ್ತು. ಐ.ಎ. ರಿಚರ್ಡ್ಸ್ ಅದನ್ನೇ ಶ್ರೇಷ್ಠವೆಂದು ಭಾವಿಸಿದ್ದು ಸತ್ಯ. ಉಳಿದವರ ಮೇಲೆ ಆ ಅಭಿಪ್ರಾಯವನ್ನು ಹೇರಲು ಪ್ರಯತ್ನಿಸಿದರೆಂದೇ ಹೇಳಬೇಕಾಗುತ್ತದೆ. ಎಫ್.ಆರ್. ಲೀವಿಸ್, ರಿಚರ್ಡ್ಸ್ ಮೊದಲಾದವರು ತಾವು ಯಾವುದೇ ರಾಜಕೀಯ ನಿಲುವಿನಿಂದ ವಿಮರ್ಶೆ ಮಾಡುತ್ತಿಲ್ಲ. ಎಂದರೂ ಅದರ ಹಿಂದೆ ಇಂಗ್ಲೆಂಡಿನ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರ ಮಧ್ಯಮ ವರ್ಗದ ಸಾಹಿತಿಗಳ ರಾಜಕಾರಣ ಸ್ಪಷ್ಟವಾಗಿ ಕೆಲಸ ಮಾಡಿದೆ. ಇಲ್ಲಿ ನಿಕಟ ಓದು ಆಗುವುದೇ ಹೊರತು ವಿಭಿನ್ನ ಬಗೆಯ 'ನಿಕಟ ಓದುಗಳು' ಆಗುವುದಿಲ್ಲ.

ಐ. ಎ. ರಿಚರ್ಡ್ಸ್ ತಮ್ಮ ಪ್ರಾಯೋಗಿಕ ವಿಮರ್ಶೆಯಲ್ಲಿ ಹೊಂದಿರುವ ನಿಕಟ ಓದು ಎಂಬ ಕಲ್ಪನೆ ಮಧ್ಯಮವರ್ಗಕ್ಕೆ ಹಾಗೂ ಪುರುಷ ಓದುಗರಿಗೆ ಸೀಮಿತವಾಗಿದೆ ಆದರೆ ಇದು "ನಿಜವಾದ ನಿಕಟ ಓದು ಆಗಬೇಕಾದರೆ ಕೆಲಸಗಾರರ ವರ್ಗ ಹಾಗೂ ಮಹಿಳಾ ವರ್ಗದ ಓದುಗರನ್ನು ಒಳಗೊಳ್ಳಬೇಕು." ಈ ದೃಷ್ಟಿಯಿಂದ ಓದುಗ ಕೇಂದ್ರಿತ ಚರ್ಚೆಯು ಮುಂಚೂಣಿಗೆ ಬರುತ್ತಿದೆ. ಆದರೆ ಅದರ ಒಳಗುಟ್ಟು (Hidden agenda) ಬೇರೆಯೇ ಇದೆ. ಅದು ಕೇವಲ "ಬಹುತ್ವ"ವಾದ ಮಾತ್ರ.

**ಪ್ರಯೋಗ:**

ಒಂದು ಪದ್ಯವು ಹೀಗಿದೆ-

**ತೊಟ್ಟಿಲ ಹೊತ್ಕೊಂಡು ತವರ್ಬಣ್ಣ ಉಟ್ಕೊಂಡು**
**ಅಪ್ಪ ಕೊಟ್ಟೆಮ್ಮೆ ಹೊಡಕೊಂಡು**
**ತೌರೂರ ತಿಟ್ಟತ್ತಿ ತಿರಿಗಿ ನೋಡ್ಯಾಳ**

ಇದನ್ನು ಬೇರೆ ಬೇರೆ ಜನರು ಹೇಗೆಓದುತ್ತಾರೆ ಎನ್ನುವುದನ್ನು ಇಲ್ಲಿ ಸೂಚಿಸಲಾಗಿದೆ.

ಓದುಗ ೧: ಈ ಪದ್ಯದಲ್ಲಿ ಹೆಣ್ಣಿನ ಚಿತ್ರಣವು ಮಾತ್ರವೇ ಇದೆ.

ಓದುಗ ೨ ( ಹೆಣ್ಣು): ಇದರ ಭಾವನೆಗಳನ್ನು ಗಂಡಸರು ಅರ್ಥ ಮಾಡಿಕೊಳ್ಳಲಾರರು.

ಆಧುನಿಕ ೩ : ಈ ಪದ್ಯವು ವಾಸ್ತವವಾಗಿ ಒಂದು ಸಮಾಜವನ್ನು ಹೇಳುತ್ತದೆ.

ಅರ್ಥಶಾಸ್ತ್ರಜ್ಞ: ಈ ಪದ್ಯವು ನಿರ್ದಿಷ್ಟಕಾಲದ ಸಮಾಜ ಮತ್ತು ಅದರ ಆರ್ಥಿಕ ಸಂಗತಿಯನ್ನು ಹೇಳುತ್ತದೆ.

ಸಮಾಜಶಾಸ್ತ್ರಜ್ಞ: ಈ ಪದ್ಯವು ಬರೀ ಒಂದು ಭಾವನೆಯನ್ನು ಮಾತ್ರವೇ ಹೇಳ್ತಾ ಇಲ್ಲ. ಇದರಲ್ಲಿ ಕೌಟುಂಬಿಕ ರಚನೆಗಳೂ ಸೇರಿಕೊಂಡಿವೆ.

ಓದುಗಳು: ಹೆಣ್ಣಾಗಿ ಅದು ನನ್ನ ಅನುಭವವನ್ನು ಹೇಳುವ ಹಾಗೆ ಭಾಸವಾಗುತ್ತದೆ.

## ನಿರಚನ ಸಿದ್ಧಾಂತ

'ನಿರಚನ' ಇದು ಒಂದು ಅರ್ಥದಲ್ಲಿ ನಮಗೆ ಅಪರಿಚಿತವಾದ ಸಿದ್ಧಾಂತವಾಗಿದೆ. ಹೀಗಾಗಿ ಇದನ್ನು ಪರಿಚಯಾತ್ಮಕವಾಗಿಯೂ ನೋಡಬೇಕಾದ ಅಗತ್ಯವಿದೆ. 'ನಿರಚನ' (Deconstruction) ಎನ್ನುವ ಪದವೇ ಈ ವಾದದ ಸ್ವರೂಪವನ್ನು ಇದರ ಅರ್ಥವ್ಯಾಪ್ತಿಯನ್ನೂ ವಿವರಿಸುತ್ತದೆ. ರಚನೆಯನ್ನು ನಿರಚನಗೊಳಿಸುವ ಪ್ರಕ್ರಿಯೆಯನ್ನು ಇದು ಸಾದರಪಡಿಸುತ್ತದೆ. 'ನಿರಚನ'ಯೆನ್ನುವುದು ಒಂದರ್ಥದಲ್ಲಿ ರಚನೆಯೆನ್ನುವುದನ್ನು ಒಡೆಯುತ್ತದೆ. ಸಾಹಿತ್ಯದಲ್ಲಿ ರಚನೆಯೆನ್ನುವುದಕ್ಕೆ ವಿಶೇಷ ಅರ್ಥವಿದೆ. ರಚನೆಯು ಒಂದು ಶಾಬ್ದಿಕ ಕಟ್ಟಡ. ಈ ಶಾಬ್ದಿಕ ಕಟ್ಟಡದಲ್ಲಿ ಒಂದು ಕೇಂದ್ರವಿದೆಯೆಂದು ರಚನಾವಾದವು ಪರಿಭಾವಿಸುತ್ತದೆ. ಸಾಹಿತ್ಯದ ಚರ್ಚೆಯ ಸಂದರ್ಭದಲ್ಲಿ ರಚನಾವಾದದ ಪರಿಕಲ್ಪನೆಯಿದೆ ಯಷ್ಟೇ? ರಚನಾವಾದಿಗಳು ಒಂದು ನಿರ್ದಿಷ್ಟ ಪರಿಕ್ರಮದ ಮೊತ್ತವನ್ನು ಸಾಹಿತ್ಯ ಚರ್ಚೆಯ ಸಂದರ್ಭದಲ್ಲಿ ಗಮನಕ್ಕೆ ತಂದುಕೊಳ್ಳುತ್ತಾರೆ. ನಿರಚನವಾದವು ಈ ವಾದವನ್ನು ಒಂದರ್ಥದಲ್ಲಿ ಒಡೆಯುವುದರಿಂದ ಈ ವಾದಕ್ಕೆ ನರಚನ ಸಿದ್ಧಾಂತವೆಂದು ಕರೆಯುತ್ತೇವೆ. 'construction' ಎನ್ನುವುದಕ್ಕೆ ನಿರ್ಮಾಣ, 'ರಚನಾಕ್ರಮ' 'ಕಟ್ಟಡ' 'ವಾಕ್ಯರಚನಾಕ್ರಮ' 'ಅಭಿಪ್ರಾಯ' ಎನ್ನುವ ಅರ್ಥಗಳಿವೆ. 'Deconstruction' ಎನ್ನುವುದು ಅದನ್ನು ಒಡೆಯುವುದು ಎಂಬುದನ್ನು ಸೂಚಿಸುತ್ತದೆ. "ನಾವು ಸೃಜನಶೀಲ ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಯೆನ್ನುವ ವರ್ಗೀಕರಣವನ್ನು ಮಾಡುತ್ತೇವೆ. ಈ ವರ್ಗೀಕರಣವು ಒಂದು ರೀತಿಯ ಭ್ರಾಂತಿ. ಇದನ್ನು ಮನುಷ್ಯರು ಸೃಷ್ಟಿಸಿದ್ದಾರೆ. ಮತ್ತು ಮನುಷ್ಯರೇ ಅದನ್ನು ಬೇಕಾದಂತೆ ರೂಪಾಂತರಗೊಳಿಸಿದ್ದಾರೆ. ಹೀಗೆ ರೂಪಾಂತರಗೊಳಿಸಿಕೊಂಡು ಅದಕ್ಕೆ ಬೇಕಾದಂತೆ ಹೆಸರನ್ನು ಕೊಟ್ಟಿದ್ದಾರೆ," ಎನ್ನುವ ಪೌಲ್.ದ.ಮನ್ ಅಭಿಪ್ರಾಯದೊಂದಿಗೆ ಇಲ್ಲಿನ ಚರ್ಚೆಯನ್ನು ಪ್ರಾರಂಭಿಸಬಹುದು. ಇದು ನಿರಚನ ಸಿದ್ಧಾಂತದ ಬಗೆಗೆ ಪ್ರಮುಖ ಸೂಚನೆಯನ್ನು ಕೊಡುತ್ತದೆ.

ಪೌಲ್.ದ.ಮನ್ ಅಭಿಪ್ರಾಯವು ಕೇವಲ ಸಾಹಿತ್ಯಕ್ಕೆ ಮೀಸಲಾಗಿರುವ ಅಭಿಪ್ರಾಯವಲ್ಲ. ಈಗ ನಾವು ಗುರುತ್ವಿಸುತ್ತಿರುವ ಸಾಹಿತ್ಯ ಕೃತಿಯೆಂಬ ಪರಿಕಲ್ಪನೆಯಾಗಲೀ; ತತ್ವಜ್ಞಾನದ ಬರವಣಿಗೆಯೆಂಬ ಪರಿಕಲ್ಪನೆಯಾಗಲೀ ಇವೆಲ್ಲವೂ ನಾವು ವರ್ಗೀಕರಿಸಿಕೊಂಡ ವಿಧಾನಗಳಾಗಿವೆ. ಈ ವಿಧಾನಗಳನ್ನು ನಾವು ಸಂವಾದಿಯಾಗಿ ಬಳಸಿಕೊಳ್ಳುತ್ತಿದ್ದೇವೆ. ಎಲ್ಲಾ ರೀತಿಯ ಬರವಣಿಗೆಗಳಿಗೂ ನಾವು ನಮಗೆ ಬೇಕಾದ ಹೆಸರನ್ನು ಕೊಟ್ಟು ಅವುಗಳನ್ನು ಚಾಲ್ತಿಗೆ ತಂದಿದ್ದೇವೆ. 'ಸಾಹಿತ್ಯ ವಿಮರ್ಶೆ' 'ಸೃಜನಶೀಲ ಸಾಹಿತ್ಯ' 'ಲಲಿತ ಪ್ರಬಂಧ' ಈ ರೀತಿಯ ವರ್ಗೀಕರಣಗಳು ಅಂತಿಮವಾಗಿ ಏನನ್ನು ಸೂಚಿಸುತ್ತವೆ? ನಾವು ಬೇರೆ ಬೇರೆ ಪ್ರಕಾರಗಳಿಗೆ ಆ ರೀತಿಯ ಹೆಸರುಗಳನ್ನು ಕೊಡುವಾಗ ನಮ್ಮ ಆಲೋಚನೆಗೆ ಒಂದು ಹೆಸರನ್ನು ಸೂಚಿಸುತ್ತೇವೆಯೇ ಹೊರತು ಮತ್ತೇನೂ ಅಲ್ಲ. 'ಪರಿಕಲ್ಪನೆ' 'ತತ್ತ್ವಜ್ಞಾನ' ಹಾಗೂ ಇನ್ನಿತರ ಅನೇಕ ಸಂವಾದ ರೂಪಿಯಾದ ಚರ್ಚೆಗಳಲ್ಲಿಯೂ ಈ ಪ್ರಶ್ನೆಯೂ ಅಡಗಿದೆ. ನಿರಚನೆ ಸಿದ್ಧಾಂತದ ಕುರಿತು ಪ್ರಸ್ತಾವಿಸುವಾಗ ಈ ಕೆಳಗಿನ ಕೆಲವು ಸಂಗತಿಗಳನ್ನು ನಿರೂಪಿಸುವುದು ಅಗತ್ಯವಾಗಿದೆ. ನಾವೆಲ್ಲರೂ ಆಲೋಚಿಸುತ್ತೇವೆ. ಅದು ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದಂತೆ ಇರಬಹುದು. ಆಲೋಚನೆಗಳು ಅನೇಕ ಸಂದರ್ಭದಲ್ಲಿ ಸಾಮಾನ್ಯ ಮತ್ತು ಮತ್ತೆ ಕೆಲವು ಸಂದರ್ಭದಲ್ಲಿ ಸಂಕೀರ್ಣವಾದವೂ ಆಗಿರುತ್ತದೆ. ಆದರೆ ಆಲೋಚನೆಯೂ ಕೂಡಾ ನಿರ್ದಿಷ್ಟವಾದ ನಿಯಮವನ್ನು ಅವಲಂಬಿಸಿಕೊಂಡಿರುತ್ತದೆ. ಈ ಆಲೋಚನೆಗಳನ್ನು ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆ ರೀತಿಯಲ್ಲಿ ಅನ್ವಯಿಸುತ್ತೇವೆ. ಹೀಗೆ ಅನ್ವಯಿಸುವಾಗ ಅಸಾಂಗತ್ಯವನ್ನು ತಡೆಹಿಡಿಯಲೂ ಪ್ರಯತ್ನಿಸುತ್ತೇವೆ. ಆಲೋಚನೆ ಎನ್ನುವುದು ಕೊನೆಗೆ ಒಂದು ತೀರ್ಮಾನಕ್ಕೆ ಬರಲು ಸಹಾಯ ಮಾಡುತ್ತದೆ. ಎಂದಾಯಿತಲ್ಲವೆ? ನಿರಚನವೆನ್ನುವ ಪ್ರಕ್ರಿಯೆಯೂ ಇದೇ ಬಗೆಯದು: ಭಾಷೆ, ಅನುಭವ ಇತ್ಯಾದಿ ಸಾಮಾನ್ಯವಾದ ಮನುಷ್ಯನ ಸಂವಾದ ಪ್ರಕ್ರಿಯೆಯ ಭಾಗಗಳನ್ನು ಗಣನೆಗೆ ತಂದಿದುಕೊಳ್ಳುತ್ತದೆ. ಸಾಹಿತ್ಯ ವಿಮರ್ಶೆಯು ಈಗಾಗಲೇ ಸಾಂಪ್ರದಾಯಿಕವಾಗಿ ಸ್ಥಾಪಿಸಿಕೊಂಡಿರುವ ಪರಿಕಲ್ಪನೆಗಳು; ವಿಮರ್ಶೆಯು ಬಳಸಿಕೊಂಡಿರುವ ಪರಿಕರಗಳು: ಅದರ ಉದ್ದೇಶಗಳು ಮೊದಲಾದವುಗಳು ಒಂದು ಮೌಲ್ಯ ನಿರ್ಣಯಕ್ಕೆ ಕಾರಣವಾಗಿವೆ. ಈ ರೀತಿಯ ಮೌಲ್ಯ ನಿರ್ಣಯದ ಸಂದರ್ಭದಲ್ಲಿ ಒಂದು ನಿರ್ದಿಷ್ಟವಾದ ಆಲೋಚನಾ ಕ್ರಮವನ್ನು ಅವು ಸ್ಥಾಪಿಸಿಕೊಂಡು ಬಿಟ್ಟಿವೆ. ಅವುಗಳು ಕೊಡುವ ಜ್ಞಾನವೆಂದರೆ ಇಷ್ಟೆ ಎಂದು ಹೇಳಿವೆ. ಸಾಹಿತ್ಯ ಕೃತಿಗಳ ಬಗೆಗಿನ ನಮ್ಮ ಆಲೋಚನೆಗಳನ್ನು ನಿರ್ದಿಷ್ಟಗೊಳಿಸಿವೆ. ಸಾಹಿತ್ಯವೆಂದರೆ 'ಇದು' ಸಾಹಿತ್ಯ ವಿಮರ್ಶೆಯೆಂದರೆ 'ಇದು' ಎಂದು ಪ್ರತ್ಯೇಕ ವಿಭಾಗಗಳನ್ನು ಮಾಡಿ ಅದಕ್ಕೆ ಒಂದು ಚೌಕಟ್ಟನ್ನು ಕೊಟ್ಟಿದ್ದೇವೆ. ಪ್ರತಿಯೊಂದು ಸೃಜನಶೀಲವಾದ ಸಾಹಿತ್ಯ ಕೃತಿಯೂ ತನ್ನದೇ ರೀತಿಯಲ್ಲಿ ಸೃಜನಾತ್ಮಕವಾಗಿರುತ್ತದೆ. ಸೃಜನಶೀಲ ಕೃತಿಯಲ್ಲಿ ಕಲ್ಪನೆಗಳಿವೆ. ರೂಪಕಗಳಿವೆ. ಇಷ್ಟೇ ಅಲ್ಲದೆ, ಸೃಜನಶೀಲ ಸಾಹಿತ್ಯ ಕೃತಿಯೆನ್ನುವುದಕ್ಕೆ ನಾವು ಬೇರೆ ಬೇರೆ ರೀತಿಯ

ವ್ಯಾಖ್ಯಾನಗಳನ್ನು ಮಾಡುತ್ತಾ ಬಂದಿದ್ದೇವೆ. ನಿರಚನವಾದಿಗಳ ಪ್ರಕಾರ ವಿಮರ್ಶೆಯೂ ಕೂಡಾ ತತ್ತ್ವಜ್ಞಾನದಂತೆ ಒಂದು ರೀತಿಯ ಬರವಣಿಗೆಯ ಚಟುವಟಿಕೆಯಾಗಿದೆ. ಅದು ಸಿದ್ಧಾಂತವು ಸಾಹಿತ್ಯ-ಸಾಹಿತ್ಯ ವಿಮರ್ಶೆಯೆಂಬ ಪ್ರತ್ಯೇಕತೆಯನ್ನು ನಿರಾಕರಿಸುವುದ ರೊಂದಿಗೆ ಸಾಹಿತ್ಯದ ಸ್ಥಾನಮಾನದಮ ನಿರ್ಣಯದಲ್ಲಿ ಸಾಹಿತ್ಯ ವಿಮರ್ಶೆ ಪ್ರಧಾನ ಪಾತ್ರ ವಹಿಸುತ್ತದೆಯೆಂಬ ವಾದವನ್ನು ಅಲ್ಲಗಳೆಯುತ್ತದೆ. ಓದುಗನನ್ನು ಒಂದು ವಲಯಕ್ಕೆ ಬಗ್ಗಿಸುವ ಕ್ರಮವನ್ನು ನಿರಚನ ಸಿದ್ಧಾಂತವು ನಿರಾಕರಿಸುತ್ತದೆ. ಇದರೊಂದಿಗೆ ನಾವು ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಸಾಮಾನ್ಯವಾಗಿ ಯಾವುದೇ ಬರವಣಿಗೆಯಲ್ಲಿ ಪ್ರಸ್ತಾವನೆಯನ್ನು ಬರುಯುತ್ತೇವೆ. ಪ್ರಸ್ತಾವನೆಯು ಮುಂದಿನ ಬರವಣಿಗೆಯ ರೂಪಕ್ಕೆ ಪೂರಕವಾಗುವಂತಿರುತ್ತದೆ. ಅದು ಬರಹಗಾರನ ಉದ್ದೇಶವನ್ನು ಒಂದರ್ಥದಲ್ಲಿ ನಿರೂಪಿಸುತ್ತವೆ. ಬರಹಗಾರನ ಯೋಚನೆಯ ಕ್ರಮವನ್ನು ಪ್ರತಿಪಾದಿಸುತ್ತದೆ. ಹೀಗಾಗಿ ಪ್ರಸ್ತಾವನೆಗೆ ಬರವಣಿಗೆಯ ಸಂದರ್ಭದಲ್ಲಿ ಸೂಚಿತ ಅಂಶಗಳಿರುತ್ತವೆ. ಮುಂದಿನ ತಾರ್ಕಿಕ ಬೆಳವಣಿಗೆಯನ್ನು ಈ ರೀತಿಯ ಪ್ರಸ್ತಾವನೆಗಳೂ ಸೂಚಿಸುವುದರೊಂದಿಗೆ ಬರವಣಿಗೆಯ ಸ್ವರೂಪವನ್ನು ಹೇಳುತ್ತವೆ. ಕೃತಿಯೊಂದಿಗೆ ಈ ಪ್ರಸ್ತಾವನೆಗಳು ಅಂಟಿಕೊಂಡು ಇರುತ್ತವೆ. ಗಾಯಿತ್ರಿ ಚಕ್ರವರ್ತಿ ಸ್ಪಿವಾಕ್ ಅವರು ಒಂದು ಸಂದರ್ಭದಲ್ಲಿ ಹೇಳಿರುವಂತೆ, ಪ್ರಸ್ತಾವನೆಯ ಸ್ವರೂಪವು ಕೃತಿಯನ್ನು ಪ್ರಾರಂಭಿಸುವಂತೆ ಮುಕ್ತಾಯಗೊಳಿಸುತ್ತದೆ ಕೂಡಾ' ಒಂದು ಕೃತಿಗೆ ಸ್ಥಿರವಾದ ಅನನ್ಯತೆಯೆಂಬುದಾಗಲೀ, ಸ್ಥಿರವಾದ ಪ್ರಾರಂಭವೆಂಬುದಾಗಲೀ ಇರುವುದಿಲ್ಲ. ಓದುವಾಗಲೆಲ್ಲ ಮೊದಲು ಪ್ರಸ್ತಾವನೆಯನ್ನು ಓದಿ ಆನಂತರ ಕೃತಿಯನ್ನು ಓದುತ್ತೇವೆ. ಹೀಗಾಗಿ ಪ್ರಸ್ತಾವನೆಯು ಸ್ವನಿರ್ದೇಶನವನ್ನು ಓದಿಗೆ ನೀಡುತ್ತದೆ. ಈ ನಿಯಮ ಮೀರಿದ ಓದಿನ ಕ್ರಮವೆಂಬುದು ಇರುವುದಿಲ್ಲ. ಈ ಮಾತನ್ನು ಇಲ್ಲಿ ಯಾತಕ್ಕೆ ಹೇಳಲಾಗಿದೆಯೆಂದರೆ ನಿರಚನ ಕುರಿತ ಕೆಲವು ಸೂಚನೆಗಳನ್ನು ಇದು ಕೊಡುತ್ತದೆ. ಈ ಅರ್ಥದಲ್ಲಿ ನಿರಚನ ಸಿದ್ಧಾಂತದಲ್ಲಿ ಈಗಾಗಲೇ ಸಿದ್ಧವಾದ ಪರಿಕಲ್ಪನೆಗಳು ವಿವರಣೆಗೆ ಒದಗುವುದಿಲ್ಲ ಮತ್ತು ಬರವಣಿಗೆಯ ಪ್ರಕ್ರಿಯನ್ನು ಒಂದು ಮಿತಿಯಿಂದ ಮುಕ್ತಗೊಳಿಸಲು ಇದು ಹವಣಿಸುತ್ತದೆ ಕೂಡಾ.

ನಿರಚನವೆಂದರೇನು? ಇದನ್ನು ರಚನೋತ್ತರ ವಿಮರ್ಶಾ ಪಂಥವೆಂದು ಗುರುತಿಸಲಾಗಿದೆ. ಹಾಗೆ ಕರೆದಾಗಲೇ ರಚನೆಯು ಒಂದು ರೀತಿಯಿಂದ ಪ್ರಾರಂಭವೆಂದು ಗುರುತಿಸಿದ ಹಾಗಾಯಿತು. ರಚನೋತ್ತರ ವಿಮರ್ಶಾ ಪಂಥಗಳು ಮುಖ್ಯವಾಗಿ 'ಪಠ್ಯ' ಮತ್ತು 'ಓದು' ಎಂಬುದನ್ನು ಕೇಂದ್ರಿಕರಿಸಿಕೊಂಡಿವೆ. ಆದರೆ ನಿರಚನ ಸಿದ್ಧಾಂತವೆನ್ನುವುದನ್ನು ಅಷ್ಟು ಸುಲಭವಾಗಿ ಹಿಡಿದಿಡಲು ಸಾಧ್ಯವಾಗುವುದಿಲ್ಲ. ಯಾಕೆಂದರೆ ಅದು ಎತ್ತಿ ಓಡಿಯುವ ಪ್ರಮುಖ ಅಂಶವೆಂದರೆ-ಪಠ್ಯವನ್ನು ಓದುವ ಕ್ರಮ ಮತ್ತು ಅರ್ಥವಿಸುವ ಕ್ರಮಕ್ಕೆ ಅನೇಕ ಸಾಧ್ಯತೆಯಿರುತ್ತದೆ ಎನ್ನುವುದೇ ಆಗಿದೆ.

ನಿರಚನ ಸಿದ್ಧಾಂತದ ಪರಿಕಲ್ಪನೆಯನ್ನು ವಾಗ್ವಾದದ ರೂಪಕ್ಕೆ ತಂದವನು ಫ್ರೆಂಚ್‌ನ

ಜೇಕೂಸ್ ಡೆರಿಡಾ. ಈಗಾಗಲೇ ರಚನಾವಾದವು ಎತ್ತಿ ಹಿಡಿದ ಅನೇಕ ಅಂಶಗಳನ್ನು ಆತ ತಿರಸ್ಕರಿಸಿದ. (ರಚನಾವಾದವು ಮುಖ್ಯವಾಗಿ ಭಾಷೆಯ ಮೇಲೆ ತನ್ನ ಗಮನವನ್ನು ಇರಿಸಿಕೊಂಡರೆ ಡೆರಿಡಾ ಅದನ್ನು ತಿರಸ್ಕರಿಸಿದ) ನಿರಚನ ಸಿದ್ಧಾಂತದ ಪರಿಕಲ್ಪನೆಯೇ ಒಂದು ರೀತಿಯಿಂದ ತತ್ತ್ವಜ್ಞಾನ. ಪಶ್ಚಿಮದ ಚಿಂತನಾಕ್ರಮದ ಪ್ರಮುಖ ಗ್ರಹಿಕೆಯಲ್ಲಿ ಒಂದು ಅಂಶವು ಮುಖ್ಯವಾಗಿದೆ. ಅದೇಂದರೆ ಸತ್ಯಕ್ಕೂ ಭಾಷೆಗೂ ನಿರ್ಣಾಯಕವಾದ ಸಂಬಂಧವಿದೆ. ಭಾಷೆಯು ತುಂಬಾ ನಿರ್ದಿಷ್ಟವಾದ ಸಂಗತಿಗಳನ್ನು ಪ್ರತಿಪಾದಿಸುತ್ತದೆ ಎಂಬ ತಿಳುವಳಿಕೆಯು ಅಲ್ಲಿದೆ. ಭಾಷೆಗೂ; ಸತ್ಯಕ್ಕೂ ಮತ್ತು ಅದು ಸೂಚಿಸುವ ಅರ್ಥಕ್ಕೂ ಸಂಬಂಧವಿದೆಯದು ಮೊದಲು ಭಾವಿಸಲಾಗಿತ್ತು. ಮುಖ್ಯವಾಗಿ ರಚನಾವಾದಿಗಳು ಈ ಅಂಶವನ್ನು ಎತ್ತಿಹಿಡಿಯುತ್ತಾರೆ. ನಮ್ಮ ಭಾಷೆಗೂ ನಿರ್ದಿಷ್ಟವಾದ ತರ್ಕವಿದೆ. ಮಾತ್ರವಿಲ್ಲ; ಅದಕ್ಕೊಂದು ಕೇಂದ್ರವಿದೆಯೆಂದು ಪರಿಭಾವಿಸುವ ನೆಲೆಯನ್ನು ನಿರಚನ ಸಿದ್ಧಾಂತ ತಿರಸ್ಕರಿಸುತ್ತದೆ. ಜೊತೆಗೆ ಭಾಷೆಯ ಮುಖಾಂತರ ಅನೇಕ ತಾರತಮ್ಯ ವ್ಯತ್ಯಾಸಗಳನ್ನು ಮಾಡಲಾಗಿದೆ. ಈ ರೀತಿಯ ತಾರತಮ್ಯ ವ್ಯತ್ಯಾಸಗಳು ಒಂದು ರೀತಿಯಲ್ಲಿ ಒಂದರ ಎದುರು ಮತ್ತೊಂದನ್ನು ನಿಲ್ಲಿಸಿ ಅಧಿಕಾರದ ನಿರ್ವಚವನ್ನು ಮಾಡುತ್ತವೆ. ಪ್ರಕೃತಿ ಮತ್ತು ಮನುಷ್ಯ: ಗಂಡು ಮತ್ತು ಹೆಣ್ಣು: ಇತ್ಯಾದಿ. ನಮ್ಮ ಭಾಷಿಕ ವಲಯದಲ್ಲಿ ರೂಪುಗೊಳ್ಳುವ ಈ ರೀತಿಯ ದ್ವಂದ್ವ ಮತ್ತು ವೈರುಧ್ಯಗಳನ್ನು ಡೆರಿಡಾ ತಳ್ಳಿಹಾಕುತ್ತಾನೆ. ಮಾತಿಗೆ ಇರುವ ನಿರ್ದಿಷ್ಟ ಅರ್ಥವಂತಿಕೆಯೆನ್ನುವುದೇ ನಿರಚನದ ಪ್ರಕಾರ ತಪ್ಪು ತಿಳುವಳಿಕೆಯಾಗಿದೆ. ಯಾವುದೇ ಮಾತಿಗೆ ನಿರ್ದಿಷ್ಟವಾದ 'ಸ್ವ-ಅನನ್ಯತೆ' ಎನ್ನುವುದು ಇಲ್ಲ. ಅರ್ಥವೆನ್ನುವುದೇ ಒಂದು ರೀತಿಯಲ್ಲಿ ಭ್ರಮಾತ್ಮಕ. ಭಾಷೆಯು ವ್ಯಕ್ತವಾಗುವ ಸಂದರ್ಭದಲ್ಲಿ ಅದರ ಒಳಗಡೆಗೆ ಆಂತರಿಕ ವೈರುಧ್ಯಗಳಿರುತ್ತವೆ. ಅಷ್ಟೇ ಅಲ್ಲ, ಮಾತಿನಲ್ಲಿ ಹಾಜರಾದ ಸಂಗತಿಗಳು ಇರುವ ಹಾಗೆಯೇ ಹಾಜರಾಗದ ಆಲೋಚನೆಯ ಕ್ರಮಗಳೂ ಇರುತ್ತವೆ. ಹಾಜರಾದ ಅಥವಾ ವ್ಯಕ್ತಗೊಂಡ ಸಂಗತಿಗಳನ್ನು, 'ಸತ್ಯ'ವನ್ನು ಪಾಶ್ಚಿಮಾತ್ಯ ತತ್ತ್ವಜ್ಞಾನವು ಪ್ರತಿಪಾದಿಸುತ್ತಾ ಬಂದಿದೆ. ಡೆರಿಡಾ ಪ್ರಶ್ನಿಸಿದ್ದು ಇದನ್ನೇ. ಹೀಗೆ ಪ್ರಶ್ನಿಸುವಲ್ಲಿ ಡೆರಿಡಾಲ್ಲಿ 'ವ್ಯತ್ಯಾಸ' ಎನ್ನುವ ಪದವೇ ಮುಖ್ಯವಾಗಿದೆ. ಅದು ಡೆರಿಡಾನಲ್ಲಿ ಅಥವಾ ನಿರಚನ ಸಿದ್ಧಾಂತದಲ್ಲಿ ಒಂದು ಪರಿಕಲ್ಪನೆಯಾಗಿದ್ದು, ನಿರಚನ ಸಿದ್ಧಾಂತದ ಒಟ್ಟು ವಾಗ್ವಾದವನ್ನು ವಿವರಿಸುತ್ತದೆ. ತುಂಬಾ ಸ್ಥೂಲವಾಗಿ ಹೇಳಬೇಕೆಂದರೆ ಒಂದು ಪದಕ್ಕೂ ಇನ್ನೊಂದು ಪದಕ್ಕೂ ವ್ಯತ್ಯಾಸವಿರುತ್ತದೆ. ಅಷ್ಟೇ ಅಲ್ಲ. ಓದಿಗೂ ಹೊರಗಣ ಜಗತ್ತಿಗೂ ವ್ಯತ್ಯಾಸವಿರುತ್ತದೆ. ಯಾವುದೇ ಪದವು ಹಲವು ನಿರ್ದಿಷ್ಟವಾದ ಅರ್ಥವನ್ನು ಸೂಚಿಸುತ್ತದೆಯೆಂತಲೂ ಹೇಳಲು ಬರುವುದಿಲ್ಲ. ಬಹಳ ಸಂದರ್ಭಗಳಲ್ಲಿ ಒಂದು ವಾಕ್ಯದಲ್ಲಿ ಬಳಸುವ ಪದಗಳು ಒಂದು ಇನ್ನೊಂದರ ಮೇಲೆ ಅಧಿಕಾರವನ್ನು ನಡೆಸುತ್ತವೆ. ಅರ್ಥವಿಸಿಕೊಳ್ಳುವಾಗ ಓದಿನ ಮೇಲೆ ಪ್ರಭಾವ ಬೀರುತ್ತವೆ. ಹೀಗಿರುವಾಗ ಪದಕ್ಕೆ ನಿರ್ದಿಷ್ಟವಾದ ಅರ್ಥವಿದೆ ಎಂದು ಹೇಳಲು ಬರುತ್ತದೆಯೆ? ಓದುಗರು ಅಥವಾ

ಕೇಳುಗರು ಪದಕ್ಕಿರುವ ಅರ್ಥಗಳನ್ನು ತಮಗೆ ಬೇಕಾದಂತೆ ನಿರ್ವಚನ ಮಾಡುತ್ತಾರೆ. ಈ ದೃಷ್ಟಿಯಿಂದ ಯಾವುದೇ ಕೃತಿಯೊಂದು ಕೊಡುವ ಅರ್ಥವು ಮುಕ್ತಾಯವಿಲ್ಲದ್ದು, ಕೃತಿಯ ಪ್ರಾರಂಭ ಮತ್ತು ಅಂತ್ಯವೆನ್ನುವುದಕ್ಕೆ ಮುಕ್ತಾಯವೇ ಇಲ್ಲ. ಆದರೆ ನಾವು ಸಾಹಿತ್ಯದ ಚರ್ಚೆಗಳಲ್ಲಿ ಸಾಮಾನ್ಯವಾಗಿ ಕೃತಿಯ ಪ್ರಾರಂಭ, ಕೃತಿಯ ಕೇಂದ್ರ ಅಥವಾ ಕೃತಿಯ ಅಂತ್ಯವೆಂಬ ಮಾತುಗಳನ್ನು ಬಳಸುತ್ತಿರುತ್ತೇವೆ. ಈ ಪದಗಳನ್ನು ಬಳಸುವ ಹಾಗೆಯೇ ಸಾಹಿತ್ಯ ಚರಿತ್ರೆ ಮತ್ತು ಸಾಂಸ್ಕೃತಿಕ ಚರಿತ್ರೆಯೆಂಬ ಪದಗಳನ್ನು ಜೊತೆಗೆ ತರುತ್ತೇವೆ. ಒಂದು ಪುಸ್ತಕಕ್ಕೆ ಇರಬಹುದಾದ ಈ ಸಂಗತಿಗಳನ್ನು ಗಮನಕ್ಕೆ ತಂದುಕೊಂಡು ಅದನ್ನು ಚಾರಿತ್ರಿಕ ಪ್ರಸಕ್ತಿಯೆಂಬಂತೆ ಗಣನೆಗೆ ತರುವ ಪ್ರಯತ್ನವನ್ನೂ ಮಾಡುತ್ತೇವೆ.

ನಿರಚನವು ಇದನ್ನು ತಿರಸ್ಕರಿಸುತ್ತದೆ. ಒಂದು ಸಾಹಿತ್ಯ ಚರಿತ್ರೆ; ಒಂದು ಸಾಂಸ್ಕೃತಿಕ ಚರಿತ್ರೆಯೆಂಬುದು ನಿರಚನದ ಪ್ರಕಾರ ಅರ್ಥಹೀನ. ಇನ್ನಷ್ಟು ಸ್ಪಷ್ಟಪಡಿಸುವುದಾದರೆ ಸಾಹಿತ್ಯಚರಿತ್ರೆಯೆಂಬುದು ಕಟ್ಟಲಾಗಿರುವ ಕೃತಕ ಕಟ್ಟಡ. ಅದನ್ನು ಸಾಹಿತ್ಯ ಚರಿತ್ರೆಕಾರರು 'ಕೃತಕ'ವಾಗಿ ಕಟ್ಟಿದ್ದಾರೆ. ಅಷ್ಟೇ ಅಲ್ಲ ಈ ರೀತಿಯ ತಿಳುವಳಿಕೆಗಳ ಮುಖಾಂತರ 'ಸಾಹಿತ್ಯಚರಿತ್ರೆ' 'ಸಂಸ್ಕೃತಿಚರಿತ್ರೆ' ನಿರ್ದಿಷ್ಟ ರೀತಿಯ 'ನಿಜ'ಗಳನ್ನು ನಮ್ಮ ಮೇಲೆ ಹೇರುತ್ತವೆ. ಆದರೆ ಅದು ಹಾಗಾಗಬೇಕಿಲ್ಲ.

ನಿರಚನದ ಅನ್ವಯವು ಬಹುತ್ವದ ಚೌಕಟ್ಟನ್ನು ಮೀರುತ್ತದೆಯೆಂಬುದು ನಿಜ. ಆದರೆ ನಿರಚನ ಸಿದ್ಧಾಂತದ ಪ್ರಕಾರ ಪಠ್ಯವೆಂದರೆ ಅಂತಿಮ ನಿರ್ಣಯವು ಸಲ್ಲದು. ಈಗಾಗಲೇ ಸಾಹಿತ್ಯ ಕೃತಿಯೆಂದರೆ ಇದುವೇ ಎಂಬ ರೀತಿಯಲ್ಲಿ ನಿರ್ವಚನ ಮಾಡಿದ್ದನ್ನು ನಿರಚನ ಸಿದ್ಧಾಂತದ ಸಂದರ್ಭದಲ್ಲಿ ಬಿಡಬೇಕಾಗುತ್ತದೆ. ಸಾಹಿತ್ಯ ಕೃತಿಗಳೆಂದರೆ ಇಂಥವು ಎನ್ನುವ ವರ್ಗೀಕರಣಗಳು ನಮ್ಮ ಮೇಲೆ ನಿರ್ದಿಷ್ಟವಾದ ಪ್ರಭಾವವನ್ನು ಬೀರಿವೆ. ಇದರ ಪರಿಣಾಮ ಸಾಹಿತ್ಯದಲ್ಲಿಯೂ ಯಾವುದು ಶ್ರೇಷ್ಠ; ಯಾವುದು ಕನಿಷ್ಠವೆಂಬ ತಿಳುವಳಿಕೆಗಳು ನಮ್ಮ ಓದಿನ ಮೇಲೆ ಪ್ರಭಾವವನ್ನು ಬೀರಿಬಿಡಬಹುದು.

ಕೃತಿಯು ಒದಗಿಸುವ ಮೂಲಾರ್ಥವೆನ್ನುವ ವಾದವೇ ಒಂದು ರೀತಿಯಿಂದ ಅರ್ಥಹೀನ, ಕೃತಿಯು ಒದಗಿಸುವ ಮೂಲಾರ್ಥ ಯಾವುದು? ಒಂದು ಕೃತಿಗೆ ಒಂದು ಮೂಲಾರ್ಥವಿದೆ, ಒಂದು ಆಶಯವಿದೆ ಎನ್ನುವ ಕಾರಣಕ್ಕೆ ನಿರಚನ ಸಿದ್ಧಾಂತವು ಕೃತಿಯನ್ನು ಗೌರವಿಸುವುದಿಲ್ಲ. ಎಲ್ಲಾ ರೀತಿಯ 'ಓದು' ವಿಶ್ಲೇಷಣೆಯಲ್ಲ. ಕೆಲವು ಸಂದರ್ಭಗಳಲ್ಲಿ ಕೃತಿಯ ಓದು ಜಡ ಮತ್ತು ಯಾಂತ್ರಿಕ. ಇದರಿಂದ ಕೃತಿಯೊಂದರ ಗ್ರಹಿಕೆಯಲ್ಲಿ ತಪ್ಪು ಕಲ್ಪನೆಗಳಿರುತ್ತವೆ. ನಿರಚನವು ಈ ರೀತಿಯದಲ್ಲ. 'ವಿಶ್ಲೇಷಣೆ' ಎನ್ನುವುದನ್ನು 'ನಿರಚನ' ಸಿದ್ಧಾಂತವು ಎತ್ತಿಹಿಡಿಯುತ್ತಿದೆ. 'ವಿಶ್ಲೇಷಣೆ' ಎನ್ನುವುದನ್ನು ನಿರಚನ ಸಿದ್ಧಾಂತ ತಿರಸ್ಕರಿಸುವುದಿಲ್ಲ. ಅದು ಓದುಗ ಪಠ್ಯವನ್ನು ಗೌರವಿಸುತ್ತದೆ ಮತ್ತು ಅದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತದೆ. ನಿರಚನ ಸಿದ್ಧಾಂತವೆಂದರೆ ವಿಮರ್ಶಾತ್ಮ ಪರಂಪರೆಯೊಂದು ನಿರ್ಮಿಸಿದ ನಿಲುವುಗಳನ್ನು ವಿರೋಧಿಸುವುದು ಎಂದು ಮಾತ್ರವೇ

ಯಾರೂ ಭಾವಿಸಬಾರದು. ಅದು ಸಾಹಿತ್ಯ ಕೃತಿಯನ್ನು ಒಡೆಯುತ್ತದೆ. ತತ್ತ್ವಜ್ಞಾನದ ಗ್ರಹಿಕೆಗಳನ್ನು ವಿರೋಧಿಸುತ್ತದೆಯೆನ್ನುವುದು ನಿರಚನ ಸಿದ್ಧಾಂತದ ಬಗ್ಗೆ ಬಂದ ಒಂದು ಅಪಕಲ್ಪನೆ 'ನಿರಚನ' ಸಿದಾಂತವೆಂದರೆ ಕೇವಲ ಭಂಜನ ಪ್ರಕ್ರಿಯೆಯಲ್ಲಿ ಮುಳುಗಿರುವುದು ಎಂದು ಅರ್ಥವಲ್ಲ. ಶಬ್ದವಿಶ್ಲೇಷಣೆಯ ಸಂದರ್ಭದಲ್ಲಿ ನಿರಚನವು ಅದು ಶಬ್ದಾರ್ಥದ ಸಮಿಪವರ್ತಿಯಂತೆ ವರ್ತಿಸುತ್ತದೆ. ಅದು ಅನುಮಾನದ ಮೇಲೆ. ಪ್ರಮೇಯದ ಮೇಲೆ ನಿಂತುಕೊಂಡು ತನ್ನ ತೀರ್ಮಾನವನ್ನೂ ವ್ಯಕ್ತಪಡಿಸುತ್ತದೆ. ಒಂದು ಪಠ್ಯದ ಮೇಲಿರುವ ಸೂಚಿತ ದ್ರವ್ಯವನ್ನು ಕೃತಿಯ ಮೂಲಕವೇ ಅರ್ಥೈಸಿಕೊಳ್ಳಲು ಪ್ರಯತ್ನಿಸುತ್ತದೆ. ಈಗಾಗಲೇ ಅಧಿಕೃತವಾಗಿರುವ ಸೂಚನೆಗಳನ್ನು ಹೇರುವ ವಿಧಾನವನ್ನು ಮಾತ್ರ ನಿರಚನ ಸಿದ್ಧಾಂತವು ಒಡೆಯುತ್ತದೆ. ಈ ವ್ಯಾಖ್ಯಾನವು ನಿರಚನ ಸಿದ್ಧಾಂತದ ಬಗೆಗಿರುವ ತಪ್ಪು ಕಲ್ಪನೆಯನ್ನು ಹೋಗಲಾಡಿಸುತ್ತದೆ. ನಿರಚನವೆಂದರೆ ಒಂದೇ ಬಗೆಯ, ನಿರ್ದಿಷ್ಟ ಮಾದರಿಯ ಓದಿನ ಕ್ರಮವನ್ನು 'ವಿರೋಧಿಸುವುದು ಎಂದರ್ಥ. ಅನೇಕ ಸಂದರ್ಭದಲ್ಲಿ ನಾವು ಕೃತಿಯನ್ನು ಓದುವಾಗ ನಾವು ಹೇರುವ ಅರ್ಥಗಳೇ ಅಂತಿಮವೆಂದು ಭಾವಿಸುತ್ತೇವೆ. 'ಕೃತಿಯ ಅರ್ಥ ಇದು' ಎಂದು ಅರ್ಥವನ್ನು ಹೇರುತ್ತೇವೆ. ಓದುಗನನ್ನು ಒಂದು ತೀರ್ಮಾನಕ್ಕೆ ಬಲಿಯಾಗುವಂತೆ ಮಾಡುತ್ತೇವೆ. ಕೆಲವೊಂದು ಸಂದರ್ಭದಲ್ಲಿ ಕೃತಿಯನ್ನು ಓದುವಾಗ ನಮ್ಮ ಪ್ರಮೇಯಗಳ ಆಧಾರದ ಮೂಲಕವೇ ಓದುತ್ತೇವೆ. ಈ ಪ್ರಮೇಯಗಳೇ ಕೃತಿಗಳು ಮೂಲ ಅರ್ಥಕ್ಕೆ ಧಕ್ಕೆಯನ್ನು ತಂದೊಡ್ಡುವ ಅಪಾಯವೂ ಇರುತ್ತದೆ. ನಿರಚನ ಸಿದ್ಧಾಂತದ ಪ್ರಕ್ರಿಯಲ್ಲಿ ಈ ರೀತಿಯ ಅಪಾಯಗಳಿಲ್ಲ. ಈ ತನಕ ಓದುವ ಪ್ರಕ್ರಿಯೆಯನ್ನು ನಿರ್ಲಕ್ಷಿಸಲಾಗಿದೆ ಅಥವಾ 'ಓದು' ಎಂಬುದನ್ನು ಭಿನ್ನ ರೀತಿಯಲ್ಲಿ ಸಂಯೋಜಿಸ ಲಾಗಿದೆ. ನಿರಚನ ಸಿದ್ಧಾಂತದಲ್ಲಿ 'ಓದು' ಎಂಬ ಪ್ರಕ್ರಿಯೆಯನ್ನು ತುಂಬುಕಾಳಜಿಯಿಂದ ನಿರ್ವಹಿಸಲಾಗಿದೆ. ಪ್ರತಿಯೊಂದು ಓದಿನ ಸಂದರ್ಭದಲ್ಲಿಯೂ ನಾವು 'ವಿಶ್ಲೇಷಣೆ'ಯೆಂಬ ಪದವನ್ನು ಬಳಸುತ್ತಿರುತ್ತೇವೆ. ಹೀಗಾಗಿ ನಿರಚನವೆಂದು ಹೇಳುತ್ತಾ ಹೋಗಿ ಇದುವೇ ನಿರಚನವೆಂದು ಹೇಳುವುದು ಕಷ್ಟದ ಸಂಗತಿ. ಅದಕ್ಕಿಂತ ಹೆಚ್ಚಾಗಿ ನಿರಚನವೆಂದರೆ, 'ಇದು' ಎಂದು ಹೇಳಬಾರದು. ನಿರಚನವು ಭಾಷಿಕ ನಿರ್ವಚನವನ್ನು ಹೊಂದಿದೆ. ನಿರಚನವೆಂದರೆ ಡೆರಿಡಾನ ಪ್ರಕಾರ ಮೂಲ ಅರ್ಥವನ್ನು (Primitive meaning) ಅಥವಾ ಶಬ್ದನಿಷ್ಪತ್ತಿಯನ್ನು ಹುಡುಕಿ ಸಂದರ್ಭದ ಜೊತೆಗೆ ಅದು ಪಡೆದುಕೊಂಡಿರುವ ಆಸರೆಯನ್ನು ನೋಡುವದು ಎಂದರ್ಥ. 'ಪಾಶ್ಚಿಮಾತ್ಯ ಆಧ್ಯಾತ್ಮಿಕ ಸ್ವರೂಪದ ಮೂಲ ಪರಿಕಲ್ಪನೆಗಳನ್ನು ಅಥವಾ ಸಾಂಪ್ರದಾಯಿಕವಾದ ಶಿಲ್ಪಕಲೆಗಳ ಹಿಂದಿರುವ ಚಿಂತನೆಗಳನ್ನು ಒಡೆದು ನೋಡುವುದರಿಂದ ಅನೇಕ ಸಂಗತಿಗಳು ದೊರೆಯುತ್ತದೆಯೆಂಬ ಹೈಡ್‌ಗರನ ವಾದಗಳಿಂದ ನಿರಚನ ಸಿದ್ಧಾಂತವು ಪ್ರೇರಣೆಯನ್ನು ಪಡೆದುಕೊಂಡಿದೆ. ಪಶ್ಚಿಮದ ಆಧ್ಯಾತ್ಮವಾದವು 'ಕೇಂದ್ರ' 'ಐಕ್ಯತೆ' ಮೊದಲಾದ ಪರಿಭಾಷೆಗಳನ್ನೂ ಒಳಗೊಂಡಿದೆ. ಅಲ್ಲಿ ಭಾಷೆಯನ್ನು ಕೂಡಾ ಸಮಸ್ಯಾತ್ಮಕಗೊಳಿಸಲಾಗಿದೆ. ಡೆರಿಡಾ ಹೇಳುವಂತೆ 'ಸಾಂಪ್ರದಾಯಿಕ ಹಾಗೂ

ತಾತ್ತ್ವಿಕ ಪರಿಕಲ್ಪನೆಗಳನ್ನು ಬದಿಗಿರಿಸಿ ಅಥವಾ ಒರೆಸಿಹಾಕಿ ಹೊಸದನ್ನು ಕಟ್ಟಬೇಕಾದ ಅಗತ್ಯವು ನಿರಚನ ಸಿದ್ಧಾಂತಕ್ಕಿದೆ ಆತನ ಪ್ರಕಾರ ಐಕ್ಯತೆಯ ಪರಿಕಲ್ಪನೆಯೇ ಆಧ್ಯಾತ್ಮಿಕವಾದುದು. ರಚನಾವಾದಿಗಳು ಹೇಳುವ ಮಾತುಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆದರೆ ಐಕ್ಯತೆಯ ವ್ಯಾಖ್ಯಾನವೇ ಅಸಾಧ್ಯವಾದುದು. ನಿರಚನ ಸಿದ್ಧಾಂತದ ಉದ್ದೇಶವು ಅದಲ್ಲ. ಈಗಾಗಲೇ ವ್ಯಾಖ್ಯಾನಕ್ಕೆ ಒಳಪಟ್ಟ ಪರಿಕಲ್ಪನೆಗಳು; ನಿಘಂಟುಗಳು ಸೂಚಿಸಿದ ಅರ್ಥವಂತಿಕೆಗಳು ಇತ್ಯಾದಿಗಳು ಕೂಡಾ ಈ ಚರ್ಚೆಯ ಸಂದರ್ಭದಲ್ಲಿ ಗಮನಕ್ಕೆ ಬರಬೇಕಾಗಿದೆ. ಭಾಷೆಯು ರೂಪಿಸುವ ಪರಿಕಲ್ಪನಾತ್ಮಕ ಅರ್ಥವಂತಿಕೆಯು ಮುಖ್ಯ. ನಿರಚನ ಸಿದ್ಧಾಂತವನ್ನು ಓದುವುದೆಂದರೆ ಒಂದು ನಿರ್ದಿಷ್ಟ ರಚನಾಕ್ರಮದ ಮಾದರಿಯನ್ನಾಗಲೀ ಗ್ರಹಿಸುವುದು ಎಂದರ್ಥವಲ್ಲ ಹಾಗೆ ನೋಡಿದರೆ ಒಂದು ಪಠ್ಯವು ಸಂಯೋಜಿಸುವ ಸಂಘಟನಾತ್ಮಕ ನಿಲುವು ಎಂಬುದೇ ಅರ್ಥಹೀನ ಏಕೆಂದರೆ ಪಠ್ಯದ ಒಳಚೌಕಟ್ಟು ಕೇವಲ ಭಾಷೆಯಲ್ಲಿಯೇ ಹೊರ ಹೊಮ್ಮುತ್ತದೆಯೆಂಬ ಸತ್ಯವನ್ನು ಒಪ್ಪಿಕೊಳ್ಳುವುದು ಕಷ್ಟ. ಯಾವುದೇ ಒಂದು ಕೃತಿಯ ಭಾಷೆಯು ಅದರಷ್ಟಕ್ಕೆ ಅದು ಸಂಪೂರ್ಣವಲ್ಲ ಹಾಗೂ ನಿರ್ದಿಷ್ಟವಾದ ವಸ್ತುವಿನ ವಿವರವನ್ನು ಬಹಳ ನಿರ್ದಿಷ್ಟವಾಗಿ ಅಭಿವ್ಯಕ್ತಿಸುತ್ತದೆಯೆಂದು ಹೇಳುವುದೂ ಕಷ್ಟ ಆದರೆ ಸಾಹಿತ್ಯ ವಿಮರ್ಶೆಯಲ್ಲಿ ಕೃತಿಯೊಂದು ಬಹಳ ನಿರ್ದಿಷ್ಟವಾದ ವಿಷಯ, ವಸ್ತು, ಮುಂತಾದವುನ್ನು ಭಾಷೆಯು ಹಿಡಿದಿಡುತ್ತದೆ ಮತ್ತು ಅದನ್ನು ಸುಸಂಘಟಿತವಾಗಿ ಅಭಿವ್ಯಕ್ತಿಸುತ್ತದೆಯೆಂದು ಹೇಳಲಾಗಿದೆ.

ನಿರಚನ ಸಿದ್ಧಾಂತವು ರಚನಾವಾದದ ಜೊತೆಗೆ ನಿಷ್ಠುರವಾದ ಸಂಬಂಧವನ್ನು ಹೊಂದಿದೆ. ಅಂದರೆ ಈ ಸಿದ್ಧಾಂತವು ರಚನಾವಾದದ ಜೊತೆಗೆ ಅಸ್ಪಷ್ಟವಾದ ಸಂಬಂಧ ಹೊಂದಿರುವುದಕ್ಕೆ ಕಾರಣವಿದೆ. ನಿರಚನ ಸಿದ್ಧಾಂತವು 'ರಚನಾಕ್ರಮ'ವನ್ನು ಭೇದಿಸುತ್ತದೆ. ಅನೇಕ ಸಂದರ್ಭಗಳಲ್ಲಿ ಈ ಸಿದ್ಧಾಂತವನ್ನು ರಚನೋತ್ತರ ವಿಮರ್ಶೆಯ ಪರಿಕ್ರಮವೆಂದು ಗುರುತಿಸುವ ಪರಿಪಾಠವೂ ಇದೆ. ಆದರೆ ಅದಕ್ಕಿಂತ ಭಿನ್ನವಾದ ನೆಲೆಗಟ್ಟಿನ ಮೇಲೆ ನಿಂತಿದೆ. ನಿರಚನ ಸಿದ್ಧಾಂತವು ಹಾಳುಗೆಡುಹುವ ಪ್ರಕ್ರಿಯೆಯಲ್ಲಿ ಮಗ್ನವಾಗಿದೆಯೆಂದು ಭಾವಿಸಬೇಕಾಗಿಲ್ಲ. ನಾವು ಅದು ಪುನರ್ ಕಟ್ಟುವ ಯೋಜನೆಯನ್ನೂ ಹೊಂದಿರುತ್ತದೆ. ಅನುಕ್ರಮ ಸಂಯೋಜನೆಯ ಪಠ್ಯಕ್ರಮವು ನಿರಚನ ಸಿದ್ಧಾಂತಕ್ಕೆ ಮುಖ್ಯವಾಗಿರುತ್ತದೆ.

ಪೌಲ್ ದ ಮನ್‌ನ ಅಭಿಪ್ರಾಯವನ್ನು ಉಲ್ಲೇಖಿಸುವುದಾದರೆ, ರಚನಾವಾದಿ ಸಂದರ್ಭದ ಮೂಲಕ ನಿರಚನ ಸಿದ್ಧಾಂತವನ್ನು ಅರ್ಥಮಾಡಿಕೊಳ್ಳಲು ಹೊರಟರೆ ಪಠ್ಯದ ವಿನ್ಯಾಸಗಳೇ ಮುಖ್ಯವಾಗಿ ಬಿಡುತ್ತದೆ. ವಿನ್ಯಾಸಗಳು ಚೌಕಟ್ಟುಗಳಾಗಿ ಬಿಡುತ್ತವೆ. ಆದರೆ ನಿರಚನ ಸಿದ್ಧಾಂತದ ಮಾದರಿಯಲ್ಲಿ ಒಂದು ಪಠ್ಯದ ರಚನಾಕ್ರಮವೆಂಬುದು ಓದುವ ಕ್ರಮದ ಬಗ್ಗೆ ಇರುವ ಒಂದು ರೂಪಕ ಮಾತ್ರ. ಅರ್ಥಮಾಡಿಕೊಳ್ಳಲಿರುವ ಸಂದರ್ಭದಲ್ಲಿ ರಚನೆಯೆಂಬುದು ಮಾಹಿತಿಯನ್ನು ಒದಗಿಸುತ್ತದೆಯೆಂದು ಹೇಳುವಂತಿಲ್ಲ. ಮತ್ತೊಂದು ಸಂಗತಿಯನ್ನು ಇಲ್ಲಿ ಪ್ರಸ್ತಾವಿಸಬೇಕು. ರಚನಾವಾದಿಗಳ ಮೂಲ ಬೇರು

ಇರುವುದು ಲೆವಿಸ್ಟ್ರಾಸ್ ಮತ್ತು ಸಸೂರರಲ್ಲಿ. ಆದರೆ ನಿರಚನ ಸಿದ್ಧಾಂತದ ಗ್ರಹಿಕೆಗಳು ಧ್ವನಿಶಾಸ್ತ್ರದ ಪಾತಳಿಯನ್ನು ಹೊಂದಿವೆ. ಡೆರಿಡಾನ ಓದು ಹೆಗೆಲ್; ಹೆಡ್‌ಗಾರರ, ಹಸ್ರೆಲ್; ರೂಸೋ ಮೊದಲಾದವರನ್ನು ಅವಲಂಬಿಸಿದೆ. ರಚನಾವಾದಿ ಪರಿಕ್ರಮದಲ್ಲಿ ಭಾಷೆಯನ್ನು ಒಂದು ಮೊತ್ತವೆಂಬಂತೆ ಪರಿಭಾವಿಸಲಾಗುತ್ತದೆ. ಸರಳ ದ್ವಂದ್ವದ ನಿಲುವನ್ನು ಅದು ತಳೆಯುತ್ತದೆ. ಆದರೆ ನಿರಚನ ಸಿದ್ಧಾಂತವು ಈ ರೀತಿಯ ಸರಳ ದ್ವಂದ್ವದ ಚೌಕಟ್ಟನ್ನು ಮೀರುತ್ತದೆ. ಡೆರಿಡಾನ ಪ್ರಕಾರ ಮಾತು ಬರವಣಿಗೆಯ ನಡುವೆ ವ್ಯತ್ಯಾಸವಿದೆ. ಬರಹದ ಸಂದರ್ಭದಲ್ಲಿ ಭಾಷೆಯು ಒಂದು ರೀತಿಯ ಒತ್ತಡಕ್ಕೆ ಸಿಲುಕುತ್ತದೆ. ಆದರೆ ಮಾತನಾಡುವ ಸಂದರ್ಭದಲ್ಲಿ ಅದು ಮುಕ್ತವಾಗಿಬಿಡುತ್ತದೆ. ಆಲೋಚನೆಗೆ ಅನುಗುಣವಾಗಿ ಮಾತು ಹೊರಹೊಮ್ಮುತ್ತದೆ. ಮಾತಾಡುವ ಸಂದರ್ಭದಲ್ಲಿ ಅದನ್ನು ಪ್ರಸ್ತುತಪಡಿಸುವುದು ಮುಖ್ಯವಾಗಿರುತ್ತದೆ. ಡೆರಿಡಾ ಹೇಳುವಂತೆ ಬರವಣಿಗೆಯು ವಿಷಯಕ್ಕೆ ಅನುಗುಣವಾಗಿ ರೂಪುಗೊಳ್ಳುವುದರೊಂದಿಗೆ ಅದರದೇ ಆದ ನಿಲುವನ್ನೂ ಹೊಂದಿರುತ್ತದೆ. ಸಂರಚನಾವಾದಿಗಳು ಹೇಳುವ ಭಾಷೆಯೂ ಏಕತೆಯ ಬಗ್ಗೆ ಡೆರಿಡಾನ ವಿರೋಧವಿದೆಯೋ ಹಾಗೆಯೇ ಸರಳ ದ್ವಂದ್ವದ ನಿಲುವಿನ ಬಗೆಗೂ ಕೂಡಾ ಯಾವುದೇ ಭಾಷೆಯಲ್ಲಾದರೂ ಮಾತು ವಿಜೃಂಭಿಸುತ್ತದೆ. ಬರಹವು ಅನಂತರ ಬರುತ್ತದೆ. ಶಬ್ದದ ಸಂಯೋಜನೆಯು ಅನೇಕ ಅರ್ಥಗಳನ್ನು ಸೃಷ್ಟಿಸುತ್ತದೆ.

ಬರವಣಿಗೆಯ ಕ್ರಮವು ಅಭಿವ್ಯಕ್ತಿ ಮತ್ತು ಅದರ ರಚನಾ ಕ್ರಮವನ್ನು ಹೊಂದಿಕೊಂಡಿರುತ್ತದೆ. ಆದರೆ ಇದು ಸರಳ ದ್ವಂದ್ವಕ್ಕಿಂತ ಆಚೆಗಿನದು. ಒಂದು ನಿರ್ದಿಷ್ಟ ತಾತ್ತ್ವಿಕ ನಿರ್ದೇಶನಗಳನ್ನು ಮೀರಿದ ರೀತಿಯಲ್ಲಿ ಡೆರಿಡಾನ ಚರ್ಚೆಯು ಮುಂದುವರಿಯುತ್ತದೆ. ಈಗಾಗಲೇ ಹೇರಲಾಗಿರುವ ಅನೇಕ ಮೌಲ್ಯಗಳನ್ನು 'ನಿರಚನ ಸಿದ್ಧಾಂತ'ವು ವಿರೋಧಿಸುತ್ತದೆ.

ನಿರಚನ ಸಿದ್ಧಾಂತದ ಪ್ರಕಾರ ಭಾಷೆಯೆಂದರೆ ಏಕತ್ರಗೊಂಡ ಅರ್ಥವಂತಿಕೆಯಲ್ಲ. ಒಂದು ಕೃತಿಯಲ್ಲಿ ಬಳಕೆಯಾದ ಭಾಷೆಯು ನಿರ್ದಿಷ್ಟ ಕೇಂದ್ರವನ್ನು ಹೊಂದಿದೆಯೆಂಬುದು ಭಾವಿಸುವ ವಿಮರ್ಶೆಯ ನೆಲೆಗಳನ್ನು ನಿರಚನ ಸಿದ್ಧಾಂತವು ಪ್ರಬಲವಾಗಿ ವಿರೋಧಿಸುತ್ತದೆ. ಹಾಗೆ ನೋಡಿದರೆ ನಿರಚನ ಸಿದ್ಧಾಂತದ ಪ್ರಕಾರ ಭಾಷೆಗೆ ಕೃತಿಯಲ್ಲಿ ಕೇಂದ್ರ ಸ್ಥಾನವಿದೆಯೆಂದು ಪರಿಭಾವಿಸುವುದೂ ಕಷ್ಟ. ಡೆರಿಡಾನ ಪ್ರಕಾರ, ಭಾಷೆಯು ಜ್ಞಾನಕ್ಕೆ ಸಂಬಂಧಿಸಿದ ಪ್ರಕ್ರಿಯೆ. ಸಾಹಿತ್ಯ ಕೃತಿಯನ್ನು ಓದುವುದೆಂದರೆ ಪೂರ್ವನಿರ್ಧಾರಿತ ಅಂಶಗಳಿಂದ ಒಡಗೂಡಿದ ಗ್ರಹಿಕೆಯ ಕ್ರಮವಲ್ಲ. ಕೃತಿಯ ಹೊರಗಿನ ಅಂಶಗಳು ಎನ್ನುವುದು ಕೃತಿಯ ಓದಿನಲ್ಲಿ ಮುಖ್ಯವಲ್ಲ. ಕೃತಿಯನ್ನು ಏನನ್ನು ಕೊಡುತ್ತದೆಯೆಂಬುದು ಮುಖ್ಯ. ಕೃತಿಯ ಹೊರಗಿನ ಅಂಶಗಳ ಬಗ್ಗೆ ವಿಶೇಷವಾಗಿ ಪ್ರಸ್ತಾವಿಸುವ ಪಂಥಗಳು. ಅದು ನಮಗೆ ಏನನ್ನು ಕೊಡುತ್ತದೆಯೆಂದು ಅನೇಕ ಸಂದರ್ಭದಲ್ಲಿ ಹೇಳುವುದೇ ಇಲ್ಲ. ಹೀಗೆ ಕೃತಿಯನ್ನು ಇಕ್ಕಟ್ಟಿಗೆ ಸಿಲುಕಿಸುವುದು ಕೃತಿಯ ಓದಿನ ಸಂದರ್ಭದಲ್ಲಿ ಅಗತ್ಯವಿಲ್ಲ.

ಕೃತಿಯ ಬರವಣಿಗೆಯೆನ್ನುವುದು ಹೆರವರಿಗೆ ಸಂಬಂಧಿಸಿದುದು. ಇನ್ನೊಬ್ಬರಿಗಾಗಿ ಬರೆಯುವುದು, ಇನ್ನೊಬ್ಬರು ಓದುವುದನ್ನು ಬಯಸುತ್ತದೆ. ಈ ಅರ್ಥದಲ್ಲಿ ನಿರಚನವೆಂದರೆ ಒಂದು ನಿರ್ದಿಷ್ಟ ಮಾದರಿಯಲ್ಲ. ಅದನ್ನು ನೆಲೆಯ ಕಡೆಗೆ ತಂದು ನಿಲ್ಲಿಸಲು ಸಾಧ್ಯವೂ ಇಲ್ಲ. ಕೆಲವರು ಓದಿನ ಕ್ರಮವನ್ನು ತಾಂತ್ರಿಕಗೊಳಿಸಿ ಅದಕ್ಕೊಂದು 'ಮಾದರಿ'ಯ ರೂಪಕವನ್ನು ಕೊಟ್ಟಿದ್ದಾರೆ. ಗಿರಡ್ಡಿ ಗೋವಿಂದರಾಜರ ಮಾತೊಂದನ್ನು ಇಲ್ಲಿ ಉದಾಹರಿಸಬಹುದು. 'ಕನ್ನಡ ಕಾದಂಬರಿಕಾರ್ತಿಯರ ಮುಕ್ಕಾಲುಪಾಲು ಕೃತಿಗಳಲ್ಲಿ ಒಡೆದು ಕಾಣುವ ಅಂಶವೆಂದರೆ ಈ ಬಗೆಯ ಕೇಂದ್ರ ವಸ್ತುವೇ ಇಲ್ಲದಿರುವುದು. ಇವರಲ್ಲಿ ಹೆಚ್ಚು ಜನ ಕೇವಲ ಘಟನೆ ಇಲ್ಲವೇ ಪಾತ್ರವೇ ಮುಖ್ಯವಾದ ಕಥೆಗಳ ನಿರೂಪಣೆಯಲ್ಲಿಯೇ ಆಸಕ್ತಿ ತಳೆದಿದ್ದಾರೆ. ಈ ಕಥೆಯ ಹಿಂದೆ ಒಂದು ನಿರ್ದಿಷ್ಟವಾದ ಉದ್ದೇಶ, ಘಟನೆ, ಪಾತ್ರವರ್ಣನೆ ಇತ್ಯಾದಿಗಳನ್ನೆಲ್ಲ ಒಂದು ಕೇಂದ್ರಕ್ಕೆ ಜೋಡಿಸುವ ವಸ್ತು ಇಲ್ಲ', (ಸಾಹಿತ್ಯ ಮತ್ತು ಪರಂಪರೆ, ೧೯೮೧, ಪು.೬೨) ಈ ಮಾತುಗಳು ಓದುವ ಕ್ರಮವನ್ನು ಜಡ ಮತ್ತು ಯಾಂತ್ರಿಕಗೊಳಿಸಿದೆ. ಬಹಳ ಸುಲಭವಾಗಿ ಕೆಲವು ಹೇಳಿಕೆಗಳು ಹೆಣ್ಣು ಮಕ್ಕಳ ಕಾದಂಬರಿಗಳ ಬಗ್ಗೆ ನೀಡುತ್ತದೆ. 'ಕೇಂದ್ರ ವಸ್ತುವೇ ಇಲ್ಲ'ವೆಂದು ಹೇಳಿದರೆ ಏನನ್ನು ಹೇಳಿದ ಹಾಗಾಯಿತು? ನಿಜವಾದ ಓದಿನ ತಾಳ್ಮೆಯಿಲ್ಲದೇ ಹೋದಾಗ ಈ ರೀತಿಯ ಮಾತುಗಳು ವಿಮರ್ಶೆಯಲ್ಲಿ ಬಳಕೆಯಾದರೆ ಆಗ ಅಲ್ಲಿ 'ಒತ್ತಾಯ'ವಿರುತ್ತದೆ. ಅವು ಓದಿಗೆ ಮಾದರಿ ರೂಪಕಗಳನ್ನು ಕೊಡುತ್ತದೆ. ನಿರಚನವು ಈ ಮಾದರಿಯನ್ನೂ ನಿರಾಕರಿಸುತ್ತವೆ. ಇದರೊಂದಿಗೆ ಗಮನಿಸಬೇಕಾದ ಅಂಶವೆಂದರೆ ಒಂದು ಕೃತಿಯ ಕೊಡುವ ಅರ್ಥವಂತಿಕೆಗೆ ನಿರ್ದಿಷ್ಟ ಹಿಡಿತವೆಂಬುದು ಇರುವುದಿಲ್ಲ. ಕೃತಿಯ ಅರ್ಥಗಳನ್ನು ಒಬ್ಬ ಬರಹಗಾರ ಹಿಡಿತದಲ್ಲಿ ಇರಿಸಿಕೊಳ್ಳಲಾರ. ಕೃತಿಯಲ್ಲಿ 'ಅರ್ಥ'ಕ್ಕೆ ನೇರ ಅನನ್ಯತೆಯೆಂಬುದು ಇರುವುದಿಲ್ಲ. ತತ್ತ್ವಜ್ಞಾನಿಗಳು ಪ್ರಣೀತಗೊಳಿಸುವ ಪರಿಕಲ್ಪನೆಗಳು ಕೃತಿಯ ಕ್ರಿಯಾತ್ಮಕ ಸ್ವರೂಪಕ್ಕೆ ಸಮಸ್ಯೆಗಳನ್ನು ತಂದೊಡ್ಡುತ್ತವೆ. ಇಷ್ಟಿದ್ದರೂ ನಿರಚನ ಸಿದ್ಧಾಂತವು ತತ್ತ್ವಜ್ಞಾನದ ಜೊತೆಗೆ ಮಾತಾಡುತ್ತದೆ. ನಿರಚನ ಸಿದ್ಧಾಂತವು ಎದುರಿಸುವ ಪ್ರಮುಖ ಪ್ರಶ್ನೆಯೆಂದರೆ ಕೃತಿಯ ಅರ್ಥದ ಸಾಧ್ಯತೆಯನ್ನು ಗುರುತಿಸುವುದಾಗಿದೆ. ಕೃತಿಯ ಆಶಯ ಮತ್ತು ವಸ್ತುವನ್ನು ನಿರಚನಗೊಳಿಸುವು ಇದರ ಉದ್ದೇಶವಾಗಿದೆ. ಬರವಣಿಗೆಯ ವಸ್ತು ಎನ್ನುವುದು ಓದಿನ ಸಮಸ್ಯೆಯೂ ಆಗಿರುವುದರಿಂದ ಈ ಪ್ರಕ್ರಿಯೆಯನ್ನು ಒಂದು ಆಶಯದ ಒಳಗಡೆಗೆ ತರಲು ಬರುವುದಿಲ್ಲ. ಹಾಗೆ ನೋಡಿದರೆ ಓದುವ ಪ್ರಕ್ರಿಯೆಯು ಒಂದು ತಾತ್ತ್ವಿಕ ಪ್ರಶ್ನೆಯೂ ಆಗಿರುತ್ತದೆ. ಒಂದು ಕೃತಿಯಲ್ಲಿರುವ ಅರ್ಥದ ಸಾಧ್ಯತೆಗಳನ್ನು ಗುರುತಿಸುವುದು ಮುಖ್ಯವಾಗಿರುತ್ತದೆ. ಡೆರಿಡಾನ ಪ್ರಕಾರ ನಿರಚನ ಎನ್ನುವುದು ಒಂದು ನಿಯಮದಿಂದ ಅಥವಾ ಒಂದು ನಿರ್ದಿಷ್ಟವಾದ ಹೊಂದಾಣಿಕೆಯಲ್ಲಿ ರೂಪುಗೊಳ್ಳುವ ಪ್ರಕ್ರಿಯಲ್ಲ. ಹಾಗೆಯೇ ಒಂದು ಕೃತಿಯನ್ನು ಕತ್ತರಿಸುವ ಚಟುವಟಿಕೆಯೂ ಅಲ್ಲ. ಓದುವ ಪ್ರಕ್ರಿಯೆಯ ನಡುವೆ ಸಂಭವಿಸುವ

ನೆಲೆಗಳು ಮಾತ್ರ. ನಿರಚನವೆಂದರೆ ಅದು ಉದ್ದೇಶಿತವಾದ, ಪ್ರಜ್ಞಾಪೂರ್ವಕವಾದ, ಅಥವಾ ವಿಷಯಗಳನ್ನು ಅನುಕ್ರಮವಾಗಿ ಸಂಯೋಜಿಸುವ ಅಥವಾ ಆಧುನಿಕತೆಯ ನೆಲೆಗಳು ಅಲ್ಲ. ನಿರಚನ ಅದರಷ್ಟಕ್ಕೆ ಹೊರಡುತ್ತಿರುತ್ತದೆ ಎಂದು ಡೆರಿಡಾ ಪ್ರತಿಪಾದಿಸುತ್ತಾನೆ. ಒಂದು ಕೃತಿಯ ಬಗ್ಗೆ ಇರುವ ನಮ್ಮ ಆಸೆ-ಆಕಾಂಕ್ಷೆಗಳ ಬಗ್ಗೆ ನಿರಚನ ಸಿದ್ಧಾಂತವು ವಿರೋಧ ವ್ಯಕ್ತಪಡಿಸುತ್ತದೆ. ಒಂದು ನಿರ್ದಿಷ್ಟ ಬಯಕೆಗಳಿಂದ ಒಂದು ಕೃತಿಯನ್ನು ಓದುವುದೆಂದರೆ ಓದಿನ ಕ್ರಮವೇ ಎಂದು ನಿರ್ದಿಷ್ಟ ನೈತಿಕ ಪ್ರಸಕ್ತಿಯಾಗಿ ಬಿಡುತ್ತದೆ. ಕೃತಿಯ ಭಾಷೆ ಮತ್ತು ಅದರ ಅರ್ಥವಂತಿಕೆಯೆನ್ನುವುದು ಪರಕೀಯವಾದ ಸಂಗತಿಗಳಲ್ಲ ಬರವಣಿಗೆಯು ಸಾಮಾನ್ಯ ಸಂದರ್ಭದಲ್ಲಿ ಒಂದು ನಿರ್ದಿಷ್ಟ ತರ್ಕವನ್ನು ಒಳಗೊಂಡಿರುತ್ತದೆ. ಬರವಣಿಗೆಯು ಓದುವ ಕ್ರಮವನ್ನು ದೂರ ಇಟ್ಟಿರುವುದಿಲ್ಲ ಮತ್ತು ಸರಳ ದ್ವಂದ್ವದ ಪ್ರಶ್ನೆಯೂ ಅಲ್ಲಿಲ್ಲ. ಹೀಗಾಗಿ ಕೃತಿಯೊಂದರ ನಿರ್ದಿಷ್ಟ ಸ್ಥಿರತೆಯೆಂಬುದು ಇರಲು ಸಾಧ್ಯವಿಲ್ಲ. ಬರವಣಿಗೆಯಲ್ಲಿ ಬಳಸಲಾಗುವ ಭಾಷೆಯೂ ಕೂಡಾ ಇನ್ನೊಬ್ಬರಿಗಾಗಿ ಇರುವಂಥದ್ದು. ಅದು ಯಾರನ್ನೋ ಉದ್ದೇಶಿಸಲಾಗಿದೆ ಎಂಬುದನ್ನು ಸಂಬಂಧಿಸಿಕೊಂಡಿರುತ್ತದೆ. ಬರವಣಿಗೆಯಲ್ಲಿ ಬಳಸಲಾಗುವ ಪದವು ನಮ್ಮ ಆಲೋಚನಾ ಕ್ರಮದ ನೇರ ಸಂಬಂಧಿಯಲ್ಲ. ಆಲೋಚನೆಯನ್ನು ಒಂದು ಪದದಲ್ಲಿ ತುಂಬಿಸಲು ಬರುವುದೂ ಇಲ್ಲ. ನಾವು ಯಾರ ಮನೆಯಾದರೂ ಹೋಗಿ, ಹೊರಡುವಾಗ 'ಹಾಗಿದ್ರೆ, ನಾನಿನ್ನು ಬರ್ತೇನೆ' ಎನ್ನುವ ವಾಕ್ಯವನ್ನು ಬಳಸುತ್ತೇವೆ ಎಂದಿಟ್ಟುಕೊಳ್ಳಿ, ಇಲ್ಲಿ 'ಬರ್ತೇನೆ' ಎನ್ನುವುದರ ಅರ್ಥ, ನಿಘಂಟಿನಲ್ಲ, ಭಾಷಾಶಾಸ್ತ್ರದ ದೃಷ್ಟಿಯಲ್ಲಿ ಒಂದನ್ನು ಸೂಚಿಸಿದರೆ ವ್ಯಾವಹಾರಿಕವಾಗಿ ಅದರ ಅರ್ಥ ಇನ್ನೊಂದು. ಅಂದರೆ, ಆಲೋಚನೆಯು ಒಂದು; ಅದರ ಭಾಷಿಕ ಅಭಿವ್ಯಕ್ತಿ ಕ್ರಮ ಇನ್ನೊಂದು. ನಿರಚನದ ದೃಷ್ಟಿಯಲ್ಲಿ ನಮ್ಮ ಆಲೋಚನೆಯು ನೇರ ಪ್ರಾತಿನಿಧಿಕ ರೂಪವಾಗಿ ಭಾಷೆಯ ಇರುವುದಿಲ್ಲ. 'ಬರವಣಿಗೆಯಲ್ಲಿ ಬಂದ ಭಾಷೆ'ಯೆಂದು ಅಷ್ಟೊಂದು ಸುಲಭವಾಗಿ ಮಾತಾಡುವ ಹಾಗೂ ಇಲ್ಲ.

ನಿರಚನವು ಭಾಷೆಯ ಔನ್ನತ್ಯ ಮತ್ತು ಅದರ ಶಕ್ತಿಯನ್ನು ಅರ್ಥವಿಸಿಕೊಳ್ಳುವ ಪ್ರಯತ್ನ ಮಾಡುತ್ತದೆ. ಒಂದು ರೀತಿಯಿಂದ ಪಠ್ಯವೆನ್ನುವುದರಲ್ಲಿ ಬಳಕೆಯಾಗುವ ಭಾಷೆಯು ನಿರ್ದಿಷ್ಟ ಹಿಡಿತದಿಂದ ಜಾರಿಕೊಳ್ಳುತ್ತದೆ ಅಥವಾ ಭವಿಷ್ಯದ ಕಡೆಗೆ ಮುಖ ಮಾಡಿ ನಿಲ್ಲುತ್ತದೆ.

ನಿರಚನವೆನ್ನುವುದು ಮಾತು, ಬರವಣಿಗೆ, ತತ್ತ್ವಜ್ಞಾನ, ಸಾಹಿತ್ಯವೆಂಬ ಸರಳ ದ್ವಂದ್ವ ನಿರೂಪಣೆಯನ್ನು ಮೀರುತ್ತದೆಯೆಂಬುದು ಗಮನಾರ್ಹ. ಬರವಣಿಗೆಯೂ ತತ್ತ್ವಜ್ಞಾನವನ್ನು ಬಿಟ್ಟಿರುವ ನೆಲೆಯಲ್ಲಿ ನಿರಚನ ಸಿದ್ಧಾಂತದಲ್ಲಿ ಪರಿಕಲ್ಪನಾತ್ಮಕ ಸ್ಪಷ್ಟತೆ ಹಾಗೂ ಸತ್ಯದ ಹುಡುಕಾಟದ ನೆಲೆಗಳಿವೆ ಅಷ್ಟೇ. ಅದು ಏಕಮುಖವಾದ ಓದಿನ ಕ್ರಮವೆಂದೂ ಭಾವಿಸಬೇಕಾಗಿಲ್ಲ. ನಿರ್ದಿಷ್ಟ ತತ್ತ್ವಜ್ಞಾನ ಮತ್ತು ಬರವಣಿಗೆಯೆಂದು ಕರೆಯುವ ಪ್ರಕ್ರಿಯೆಯನ್ನು ಭೇದಿಸಿ ನೋಡುವ ಕ್ರಮವನ್ನು ಹೇಳಿಕೊಡುತ್ತದೆ. ತತ್ತ್ವಜ್ಞಾನದ

ಕಾರಣವನ್ನು ಹುಡುಕಲಾಗುತ್ತದೆ. ಹಾಗೂ ಸತ್ಯದ ಅನ್ವೇಷಣೆಯ ಪ್ರಯತ್ನವಿರುತ್ತದೆಯೆಂದು ಭಾವಿಸಲಾಗಿದೆ. ಡೆರಿಡಾನ ಪ್ರಕಾರ ಈ ರೀತಿಯ ಧೋರಣೆಯಿಂದಾಗಿ ಬರವಣಿಗೆಯು ತತ್ತ್ವಜ್ಞಾನಕ್ಕಿಂತ ಹೊರತಾದ ಪ್ರಕ್ರಿಯೆಯೆಂದೂ, ಅವೆರಡು ಬೇರೆ ಬೇರೆ ರೂಪಗಳೆಂದೂ ಭಾವಿಸಲಾಗಿದೆ. ಹೀಗಾಗಿ ತತ್ತ್ವಜ್ಞಾನಕ್ಕೆ ಮೊದಲನೆ ಹಾಗೂ ಶ್ರೇಷ್ಠ ಸ್ಥಾನವನ್ನು ಕೊಡಲಾಗಿದೆ. ಸಾಹಿತ್ಯ ವಿಮರ್ಶಕರಂತೂ ಇದನ್ನು ಬೇರೆಯದೇ ಆದ ಒಂದು ಜ್ಞಾನರೂಪವೆಂದೇ ಪರಿಭಾವಿಸಿದ್ದಾರೆ. ಇದರಿಂದಾಗಿ ಈ ರೀತಿಯ ವಿಚಾರಧಾರೆಗಳು ಅನೇಕ ಪರಿಣಾಮವನ್ನು ಬೀರಿವೆ. ತತ್ತ್ವಜ್ಞಾನವು ವಿಶಿಷ್ಟವಾದುದು. ಅದು ಸತ್ಯವನ್ನು ಹೇಳುವ ಸಂವಾದಿ ಕ್ರಮಗಳಲ್ಲಿ ಒಂದು. ಅದರ ಪಠ್ಯಗಳೇ ಒಂದು ರೀತಿಯಲ್ಲಿ ಕಾಲಗೌರವದ ಅಂಶಗಳೇ ಆಗಿರುವುದರಿಂದ ಡೆರಿಡಾನಲ್ಲಿ ವಿಶೇಷ ಅರ್ಥವಂತಿಕೆಯ ಪರಿಕಲ್ಪನೆಯನ್ನು ನಿರಾಕರಿಸುವಂತೆ ಮಾಡಿವೆ. ತತ್ತ್ವಜ್ಞಾನದ ಬರವಣಿಗೆಗಳೂ ಕಾಲದ ಹೊರತಾಗಿ ಇರುವುದಿಲ್ಲ. ಹಾಗೆಯೇ ತತ್ತ್ವಜ್ಞಾನದ ಬರವಣಿಗೆಗಳೆಂದರೆ ಅವಕ್ಕೆ ವಿಶೇಷ ಅರ್ಥವಂತಿಕೆಗಳು: ವಿಶೇಷ ಪರಿಕಲ್ಪನೆಗಳು ಇವೆ ಎಂಬುದಕ್ಕೆ ನಿರಚನವು ಪ್ರಾಶಸ್ತ್ಯವನ್ನು ಕೊಡುವುದಿಲ್ಲ.

ತತ್ತ್ವಜ್ಞಾನದ ಗ್ರಹಿಕೆಗಳು ಬರವಣಿಗೆಯ ರೂಪಕ್ಕೆ ಬಂದಾಗ ಅದರದೇ ಆದ ಗುಣವನ್ನು ಹೊಂದಿರುತ್ತದೆ. ಬರವಣಿಗೆಯ ಗುಣವೆನ್ನುವುದು 'ದೃಶ್ಯದ' ಮಾಧ್ಯಮವು ಹೌದು. ಬರವಣಿಗೆಯ ರೂಪಕ್ಕೆ ಇಳಿದಾಗ ಅದು ಸಾಹಿತ್ಯದ ಒಂದು ವರ್ಗಕ್ಕೆ ಸೇರಿಸಿಕೊಳ್ಳುತ್ತದೆ. ಡೆರಿಡಾನ ಪ್ರಕಾರ ಈ ರೀತಿಯ ಲಿಖಿತ ರೂಪಕ್ಕೆ ಇಳಿದ ತತ್ತ್ವಜ್ಞಾನದ ಗ್ರಹಿಕೆಗಳನ್ನು ಸಾಹಿತ್ಯಕ್ಕಿಂತ ದೂರವಿಡುವಂತೆ ಒತ್ತಾಯಿಸಲಾಗಿದೆ. ಇದರ ಬಗ್ಗೆ ವೆಲೆರಿಯು ಮಾಡಿದ ಪ್ರತಿಕ್ರಿಯೆಯು ಕುತೂಹಲ ಕೆರಳಿಸುವಂತಿದೆ. 'ದೃಶ್ಯದ ಚೌಕಟ್ಟಿಗೆ ಇಳಿದ ತತ್ತ್ವಜ್ಞಾನವು ನುಣಪಾಗಿ ಜಾರಿಕೊಳ್ಳುವ ಸಂಕೇತಶಾಸ್ತ್ರವನ್ನು ಬಿಡುಗಡೆಗೊಳಿಸುತ್ತದೆ. ಅಷ್ಟೇ ಅಲ್ಲ ಬುದ್ಧಿಜೀವಿಗಳಿಗೆ ತತ್ತ್ವಜ್ಞಾನದ ಪರಿಕಲ್ಪನೆಯ ಸತ್ಯವನ್ನು ಬೌದ್ಧಿಕವಾಗಿ

ಸ್ಪರ್ಶಿಸುವ ಮೈಲಿಗಲ್ಲುಗಳಾಗಿರುತ್ತದೆ. ಉಳಿದ ರೂಪಕಗಳನ್ನು ಹೀಗೆ ಹೂತು ಬಿಡುತ್ತದೆ. ಜ್ಞಾನದ ಅಪಾರ ಸಾಧ್ಯತೆ ಮತ್ತು ಸತ್ಯವೆನ್ನುವುದು ಅನನ್ಯತೆಯನ್ನು ಹಾಗೂ ಸ್ವಾಭಿವ್ಯಕ್ತ ರೀತಿಯನ್ನು ಮಾತಾಡುವ ವಿಷಯವನ್ನು ಆಧರಿಸಿಕೊಂಡಿರುತ್ತದೆ. ಅನೇಕ ತತ್ತ್ವಜ್ಞಾನಿಗಳು ಅವರ ಆಲೋಚನೆಗಳನ್ನು ಮಾತಿನಲ್ಲಿ ವ್ಯಕ್ತಪಡಿಸಿದ್ದಾರೆ. ನಿರಚನ ಸಿದ್ಧಾಂತವು ಸದಾ ನಮ್ಮ ಆಲೋಚನೆಯೊಂದಿಗೆ ಬಂದಿರುವ ಪೂರ್ವಾಗ್ರಹದ ಮನಸ್ಸು ಭಾಷೆ ಮತ್ತು ವಾಸ್ತವದ ಕುರಿತು ಹೇಳುತ್ತದೆ. ನಾವು ಬರವಣಿಗೆಗಿಂತ ಮೊದಲು ಮಾತನ್ನು ಆಶ್ರಯಿಸುತ್ತೇವೆ. ಮಾತೆಂದರೆ ಆಲೋಚನೆಯ ಪರಿಶುದ್ಧ ಬಳಕೆಯ ಕ್ರಮವಾಗಿರುತ್ತದೆ. ನಮ್ಮ ಸ್ವಾಭಿವ್ಯಕ್ತ ಆಲೋಚನೆಯನ್ನು ಮಾತು ಒಳಗೊಂಡಿರುತ್ತದೆ. ಆದರೆ ಬರವಣಿಗೆಯು ಹಾಗಲ್ಲ ಅದು ಪುಟಗಳ ಮೇಲಿನ ಯಾದೃಚ್ಛಿಕವಾದ ಗುರುತು ಮಾತ್ರ. ಹೀಗಾಗಿ ಪುಟಗಳ ಮೇಲಿನ ಗುರುತು ಒಂದು ರೀತಿಯಿಂದ ಓದುವ

ಸಂದರ್ಭವನ್ನು ನಿಯಂತ್ರಿಸುತ್ತದೆ. ಬರವಣಿಗೆಯು ಈ ರೀತಿಯಲ್ಲಿ ಒಂದು ಚೌಕಟ್ಟಾಗಿ ಕೆಲಸ ಮಾಡುವುದರಿಂದ ಅದರಿಂದಾಚೆಗೆ ಯೋಚಿಸಲು ಸಾಧ್ಯವಿಲ್ಲ ಓದುವ ಕ್ರಿಯೆಯಲ್ಲಿ ಪಠ್ಯವು ಈ ಕಾರಣದಿಂದಾಗಿ ಯಜಮಾನವೇ ಸರಿ. ಓದುವ ಕ್ರಿಯೆಯಲ್ಲಿ ಒಂದು ಓದಿನ ಕ್ರಮ ಮತ್ತೊಂದು ಓದಿಗಿಂತ ಭಿನ್ನವಾಗಿರುತ್ತದೆ. ಓದುಗನಲ್ಲಿಯೂ ಭಿನ್ನತೆಯಿರುತ್ತದೆ. 'ಪಠ್ಯ'ವೆನ್ನುವುದು ತಾಂತ್ರಿಕವಾದುದು. ಅದು ಒಳಗೊಳ್ಳುವ ಆಶಯಗಳು; ಅರ್ಥವಂತಿಕೆಗಳು ಇನ್ನೊಂದು 'ಪಠ್ಯ'ದ ಜೊತೆಗೆ ಸಂಬಂಧವಿರಸಿಕೊಂಡಿರುತ್ತವೆ. ಬೇರೆ 'ಸ್ವರೂಪ'ದ ಜೊತೆಗೆ ಆಂತರಿಕವಾಗಿ ಒಳಗೊಂಡಿರುತ್ತವೆ. ಹಾಗೆಯೇ ಪಠ್ಯಗಳು ರೂಪಿಸುವ ಸಂವಾದ ವಿಷಯಗಳಿಗೆ ಸಂಬಂಧಿಸಿದಂತೆ ಇರುತ್ತವೆ. ಇದಕ್ಕೆಲ್ಲಾ ಪ್ರಮುಖವಾಗಿ ಮಾತನಾಡುವ ಅಥವಾ ಬರೆಯುವ ಕೆಲಸದಲ್ಲಿ ಒಳಗೊಂಡಿರುವ ಭಾಷೆಯೇ ಆಗಿದೆ. ಹೀಗಾಗಿ ಯಾವುದೇ ಪಠ್ಯವನ್ನು ಓದುವುದೆಂದರೆ ಒಂದು ತತ್ತ್ವಜ್ಞಾನವನ್ನಾಗಲೀ ಅಥವಾ ಸಾಹಿತ್ಯವನ್ನೇ ನೇರ ಬಿಂಬವಾಗಿ ಇರಿಸಿಕೊಳ್ಳುವುದು ಎಂದರ್ಥ. ಈ ಸಂಗತಿಗಳು ಹೊರಗಿನ ವಿಷಯಗಳನ್ನು ಆಧರಿಸಿಕೊಂಡಿರುತ್ತವೆ. ಬರವಣಿಗೆಯು ಆಂತರಿಕ ಪಠ್ಯದಲ್ಲಿ ಒಂದರಿಂದ ಒಂದಕ್ಕೆ ಚಲಿಸುತ್ತದೆ. ನಿರ್ದಿಷ್ಟ ಲಕ್ಷಣವನ್ನು ನಿರ್ದಿಷ್ಟ ತಾರ್ಕಿಕತೆಯನ್ನು ಇಂಥ ಸಂದರ್ಭದಲ್ಲಿ ಭಾಷೆಯು ಒಳಗೊಳ್ಳಬೇಕಾಗುತ್ತದೆ. ನಮ್ಮ ಆಲೋಚನೆಯ ಕ್ರಮ, ನಮ್ಮ ಭಾಷೆಯ ಮೇಲೆ ನಿರ್ದಿಷ್ಟವಾದ ಚಹರೆಯ ಒತ್ತನ್ನು ಸ್ಥಾಪಿಸಿಕೊಂಡಿಬಿಟ್ಟಿದೆ. ಈ ರೀತಿಯ ಚಹರೆಯು ನಮ್ಮ ಸಾಮಾನ್ಯವಾದ ಸತ್ಯದ ಅರಿವನ್ನು ಒಳಗೊಂಡಿರುತ್ತದೆ. ಇದರಿಂದಾಗಿ ಭಾಷೆಗೆ ಇರಬಹುದಾದ ವಿಶಿಷ್ಟವಾದ ಚಾರಿತ್ರಿಕ ಮತ್ತು ತಾತ್ತ್ವಿಕ ಮೂಲಗ್ರಹಿಕೆಗಳು ಚಾಲ್ತಿಗೆ ಬಂದಾಗ ಹೊರಟುಹೋಗುತ್ತದೆ. ಈ ಹಿನ್ನೆಲೆಯಿಂದ ಜೇಕೂಸ್ ಡೆರಿಡಾನು 'ತಾತ್ತ್ವಿಕತೆಯೆಂದರೆ ಅದೊಂದು ನಿರ್ದಿಷ್ಟ ಶಿಸ್ತಿನಿಂದ ಕೂಡಿದ ಆಲೋಚನಾಕ್ರಮ' ಎಂಬ ಚೌಕಟ್ಟನ್ನು ಮೀರುತ್ತಾನೆ. ತತ್ತ್ವಜ್ಞಾನವೆಂದರೆ ಒಳಮುಖಿ ಪಠ್ಯದ ಆಂತರಿಕ ಚೌಕಟ್ಟನ್ನು ಮೀರಿ ನಡೆಯುವ ಚೈತನ್ಯವೆಂದು ಭಾವಿಸುವುದು ಹೆಚ್ಚು ಅರ್ಥಪೂರ್ಣ ಎಂದೂ ಆತ ಭಾವಿಸುತ್ತಾನೆ. ಒಂದು ಸಂದರ್ಭದಲ್ಲಿಯಂತೂ ಡೆರಿಡಾ, ತತ್ತ್ವಜ್ಞಾನಿಯು ಭಾಷೆಗಿಂತಲೂ ಅತೀತನೆ?' ಎಂದು ಕೇಳುತ್ತಾನೆ. ಹೀಗೆ ಕೇಳುವಾಗ ಒಬ್ಬ ತತ್ತ್ವಜ್ಞಾನಿಯೂ ಕೂಡಾ ಭಾಷೆಯಲ್ಲಿಯೇ ತನ್ನ ಆಲೋಚನಾ ಕ್ರಮವನ್ನು ವ್ಯಕ್ತಪಡಿಸುತ್ತಾನೆ. ಅಂತಿಮವಾಗಿ ಭಾಷೆಯೆಂಬುದು ಆತನಿಗೂ ಕೂಡಾ ಒಂದು ವಾಹಕವಾಗಿರುತ್ತದೆ ಎಂಬ ಅಭಿಪ್ರಾಯವಿದೆ. ಕ್ರಿಸ್ಟೋಫರ್ ನಾರಿಸ್ ಇದರ ಬಗೆಗೆ ಪ್ರತಿಕ್ರಿಯಿಸುತ್ತಾ 'ಡೆರಿಡಾ ಈ ರೀತಿಯಲ್ಲಿ ಪ್ರಶ್ನಿಸುವಾಗ ತಾನು ಅತಾತ್ವಿಕವಾಗಿ ಈ ರೀತಿಯಲ್ಲಿ ಮಾತಾಡುತಿದ್ದೇನೆ' ಎಂದು ಭಾವಿಸಿದಂತಿದೆ. ಆದರೆ ತತ್ತ್ವಜ್ಞಾನ ಎಂಬುದು ಕೇವಲ ಅದರಷ್ಟಕ್ಕೆ ಇರುತ್ತದೆ. ಅದರ ಮೂಲ ಸ್ವರೂಪ ಅದಕ್ಕಿರುತ್ತದೆ. 'ನಿರಚನ' ಸಿದ್ಧಾಂತವನ್ನು ವ್ಯಾಖ್ಯಾನಿಸುವಲ್ಲಿ ಕೆಲವು ತೊಡಕುಗಳಿವೆ.

- ಮೊದಲನೆಯದಾಗಿ, ನಿರಚನವೆಂದರೆ 'ಇದುವೆ' ಎಂದು ಬೆರಳೆತ್ತಿ

ತೋರಿಸಿಬಿಟ್ಟರೆ ಆಗ ಅದು ಒಂದು ಮಿತಿಗೊಳಿಸಿದ, ಹೇರಲಾಗಿರುವ ಅರ್ಥವಂತಿಕೆಯಾಗಿ ಬಿಡುತ್ತದೆ ಎಂಬ ವಿಷಯವನ್ನು ಮತ್ತೊಮ್ಮೆ ನೆನಪಿಗೆ ತಂದುಕೊಳ್ಳುವುದು ಒಳಿತು.

- ಎರಡನೆಯದಾಗಿ, ನಿರಚನ ಸಿದ್ಧಾಂತವನ್ನು ಒಂದು ನಿರ್ದಿಷ್ಟ ತತ್ತ್ವ ಪ್ರಣಾಳಿಕೆಗೆ ಅಳವಡಿಸುವುದು ತುಂಬಾ ಕಷ್ಟ. ಯಾಕೆಂದರೆ, ಡೆರಿಡಾನೇ ಹೇಳುವಂತೆ ಅದು ಒಂದು ಮೌಲ್ಯವಾಗಿ ಕಾಡಲು ತೊಡಗುತ್ತದೆ.
- ಮೂರನೆಯದಾಗಿ ತತ್ತ್ವಜ್ಞಾನ; ಅಂತರ(ವ್ಯತ್ಯಾಸ); ಭಾಷೆ ಇತ್ಯಾದಿ, ಪ್ರಶ್ನೆಗಳನ್ನು

ಬರವಣಿಗೆಯ ಜೊತೆಗೆ ಒಂದು ಮಿತಿಯಲ್ಲಿ ಇರಿಸಿಕೊಳ್ಳುವಂತಿಲ್ಲ. ನಿರಚನ ಸಿದ್ಧಾಂತವು ಆತ್ಮವಿದ್ಯೆ ಅಥವಾ ಅಲೌಕಿಕದ ಮೂಲ ಪರಿಭಾಷೆಯನ್ನು ಒಳಗೊಂಡಿದೆ. ಈ ಪರಿಭಾಷೆಯನ್ನು ಡೆರಿಡಾನೆ ವಿವರಿಸಲು ಹೈಡ್‌ಗಾರ್‌ನನ್ನು ಅವಲಂಬಿಸಿದ್ದಾನೆ. 'ಅಲೌಕಿಕ' ಎನ್ನುವುದು ಇನ್ನೊಬ್ಬರಿಗೆ ಸಂಬಂಧಿಸಿರುವುದರ ಮಧ್ಯೆ ಹುಟ್ಟಿಕೊಂಡಿರುವಂಥದ್ದಾಗಿದೆ. ನಿರಚನ ಸಿದ್ಧಾಂತದಲ್ಲಿ ಅನನ್ಯತೆ ಮತ್ತು ವ್ಯತ್ಯಾಸವೆಂಬುದು ಪದೇ ಪದೇ ಬರುವ ಪದಗಳಾಗಿವೆ ನಮ್ಮ ಬಯಕೆಗಳೇ ನಮ್ಮ ಬರವಣಿಗೆಗೆ ಕಾರಣವಾಗಿಬಿಡುತ್ತದೆ ಇದು ಅನನ್ಯತೆಯನ್ನು ಸೂಚಿಸುತ್ತದೆ.

ಡೆರಿಡಾ ಹೇಳುವಂತೆ, ಒಂದು ಪಠ್ಯದಲ್ಲಿ ಬಳಕೆಯಾದ ಸಾಹಿತ್ಯಿಕ ಅರ್ಥವಂತಿಕೆಗೆ ಸಾಹಿತ್ಯಿಕ ಹಾಗೂ ಪ್ರಯೋಗದ ನೆಲೆಗಳಿರುತ್ತವೆ. ನಿರಚನ ಸಿದ್ಧಾಂತವು ಹಿಂಸೆಯಾಚೆಗಿನ ಪ್ರಯತ್ನವೂ ಹೌದು. ಅದು ಮತ್ತೊಮ್ಮೆ ಅರ್ಥವನ್ನು ಕಟ್ಟುತ್ತದೆ.

ಒಂದು ಸಂದರ್ಭದಲ್ಲಿ ಡೆರಿಡಾನೇ ಹೀಗೆ ಹೇಳುತ್ತಾನೆ. ತತ್ತ್ವಜ್ಞಾನವು ಏನು ಹೇಳುತ್ತದೆ? ಒಬ್ಬ ತತ್ತ್ವಜ್ಞಾನಿಯು ತತ್ತ್ವಜ್ಞಾನಿಯಾಗಿದ್ದುಕೊಂಡು ಏನನ್ನು ಹೇರುತ್ತಾನೆ? ಯಾವುದು ಒಂದು ವಸ್ತುವಿನಲ್ಲಿ ಸತ್ಯ ಅಥವಾ ಯಾವುದು ಒಂದು ವಸ್ತುವಿನ ಅರ್ಥ? ಒಂದು ಭಾಷೆಯನ್ನು ಅನುವಾದಿಸುವ ಸಂದರ್ಭದಲ್ಲಿ ಮೊದಲು ಅರ್ಥವನ್ನು ಅನುವಾದಿಸುತ್ತೇವೆಯೆ: ಅಥವಾ ಭಾಷೆಯನ್ನೆ? ಭಾಷೆಯಲ್ಲಿ ಅರ್ಥವು ಯಜಮಾನಿಕೆಯನ್ನು ವಹಿಸುವುದಿಲ್ಲವೆ? ಈ ಮಾತು ನಿರಚನ ಸಿದ್ದಾಂತದ ಹಿಂದಿರುವ ತತ್ತ್ವಜ್ಞಾನದ ಪರಿಗ್ರಹಿಕೆಗಳನ್ನು ಸೂಚಿಸುತ್ತದೆ.

ನಿರಚನ ಸಿದ್ಧಾಂತವು ಬಯಕೆ (Desire) ಮತ್ತು ಒತ್ತಡ (Repression) ಗಳ ಕುರಿತು ಮಾತಾಡುತ್ತದೆ. ಕೃತಿಕಾರನ ಬಯಕೆ ಮತ್ತು ಕೃತಿಯ ಸೂಚನೆಗಳ ಹಿಂದಿರುವ ಒತ್ತಡಗಳ ನಡುವಣ ವ್ಯತ್ಯಾಸವು ಇಲ್ಲಿ ಮುಖ್ಯ. ಈ ಸಂದರ್ಭದಲ್ಲಿ ಮನೋವಿಜ್ಞಾನದ ಪರಿಕರಗಳನ್ನು ಬಳಸಿಕೊಳ್ಳಲಾಗಿದೆ. ಗಾಯಿತ್ರಿ ಸ್ಪಿವಾಕ್ ಅವರು ಹೇಳುವಂತೆ, 'ಈ ಪರಿಕರವನ್ನು ನಿರಚನ ಸಿದ್ಧಾಂತವು ಒಂದು ನಿರ್ದಿಷ್ಟ ಹಾಗೂ ಪ್ರಾದೇಶಿಕ ನೆಲೆಗಟ್ಟಿನಲ್ಲಿ ಮಾತ್ರ ಬಳಸಿಕೊಳ್ಳದೆ ಅದನ್ನು ಓದಿನ ಕ್ರಮದಲ್ಲಿ ಬಳಸಿಕೊಳ್ಳಲಾಗಿದೆ. ಮಾತು ಮತ್ತು

ಬರವಣಿಗೆಯ ನಡುವಣ ಸಂಬಂಧದ ವಿಶ್ಲೇಷಣೆಯು ಈ ಬಗೆಯದು. ಯಾವುದೇ ಪಠ್ಯದ ಅನ್ವಯದ ಸಂದರ್ಭದಲ್ಲಿ ಅದರ ಲಯ, ಆಶಯ; ನಿರೂಪಣೆಯ ವಿಧಾನ ಇತ್ಯಾದಿಗಳನ್ನು ಮನಗಾಣುವುದು ಸರಿಯಷ್ಟೆ? ಇದನ್ನು ಓದಿನಲ್ಲಿ ನಾವು ಪುನರಾವರ್ತಿಸುತ್ತೇವೆ'. ಒಟ್ಟಿನಲ್ಲಿ ನಿರಚನವೆಂದರೆ ಒಂದು ನಿರ್ದಿಷ್ಟವಾದ ಮಾದರಿಯಲ್ಲಿ ನಾವು ಮಾಡಿಕೊಳ್ಳುವ ಕೌಶಲಗಳಲ್ಲಿಯೇ ನಿರಚನ ಹುಟ್ಟಿಕೊಳ್ಳುತ್ತದೆ. ಅಲೌಕಿಕದ ಲೆಕ್ಕದಲ್ಲಿ ಅಭಿವ್ಯಕ್ತಿಗೆ; ಸೂಚನೆಗೆ ಮೂಲ ನೆಲೆಗಟ್ಟುಗಳಿವೆ. ರಾಚನಿಕ ಲೆಕ್ಕದಲ್ಲಿ ಒಂದು ರಚನೆಯಲ್ಲಿ ಬರುವ ಸೂಚನೆಗೆ ನಿರ್ದಿಷ್ಟ ಸಂದರ್ಭಗಳು; ಹೇರುವ ಅರ್ಥವಂತಿಕೆಗಳು ಇರುತ್ತವೆ. ರಾಚನಿಕ ಕ್ರಮದಲ್ಲಿ ಭಾಷೆಯು ಕೊಡುವ ಸೂಚನೆಯು ಹೊಸ ಸಂದರ್ಭವೊಂದನ್ನು ನಿರ್ಮಿಸಿಕೊಳ್ಳುತ್ತದೆ. ಭಾಷೆಯ ಸೂಚನೆಯು ಇಲ್ಲಿ ಸಂದರ್ಭಕ್ಕೆ ಅನುಸಾರವಾಗಿ ಹೊಸ ಸಾಧ್ಯತೆಯನ್ನು ಪಡೆದುಕೊಳ್ಳುವುದು ಮಾತ್ರವಲ್ಲ, ಅದರ ಮುಖೇನ ಹೊಸ ರಚನಾಕ್ರಮದ ಸಾಧ್ಯತೆಯೊಂದಿಗೆ ಹೊಂದಾಣಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತದೆ. ಭಾಷೆಯ ಹಿಂದಿನ ಆಧ್ಯಾತ್ಮಿಕ ಪರಿಭಾಷೆಯಲ್ಲಿ ಹೇಳುವುದಾದರೆ ಭಾಷೆಯು ಸಂಕೇತವು ಅಲ್ಲಿ ನಿಜವಾದ ಅರ್ಥವನ್ನೂ ಮೂಲದ ನಿಲುವನ್ನು ಹೊಂದಿರುತ್ತದೆ. ರಾಚನಿಕ ಸಂದರ್ಭದಲ್ಲಿ ಪಠ್ಯವು ಹೊಂದಿರುವ ಅರ್ಥಕ್ಕೆ ಬರಹಗಾರನ ಉದ್ದೇಶ ಮತ್ತು ಸಾಹಿತ್ಯ ಭಾಷೆಯ ನಿಲುವು ಮುಖ್ಯವಾಗಿರುತ್ತದೆ. ಒಂದು ಪಠ್ಯದ ಜೊತೆಗೆ ಅನುಸಂಧಾನ ನಡೆಸುವ ಸಂದರ್ಭದಲ್ಲಿ ಅನುಸಂಧಾನವು ಪೂರ್ಣ ರೂಪದಲ್ಲಿ ಪಠ್ಯವನ್ನು ಕಂಡುಕೊಳ್ಳಲು ಸಾಧ್ಯವಲ್ಲ. ಅಷ್ಟೇ ಅಲ್ಲ ಕೃತಿಯ ಜೊತೆಗಿನ ಅನುಸಂಧಾನವು ಅನೇಕ ದಾರಿಗಳ ಮತ್ತು ಸಂದರ್ಭಗಳ ಮೂಲಕ ಕಂಡುಕೊಳ್ಳುವ ಸಾಧ್ಯತೆಯೂ ಆಗಿರುತ್ತದೆ. ಅಲೌಕಿಕತೆಯ ಪ್ರಕಾರ ಭಾಷೆಯ ಸಂಕೇತವೆನ್ನುವುದು ಅಭಿವ್ಯಕ್ತಿಯೊಂದರ ಚಿಹ್ನೆ ಮಾತ್ರ. ಆದರೆ ಸಾಹಿತ್ಯ ಭಾಷೆಯ ಸಂದರ್ಭದಲ್ಲಿ ಸಂಕೇತದ ಸಂಕೇತವಾಗಿ ಮಾರ್ಪಡುತ್ತದೆ.

**ಪ್ರಯೋಗ ೧**

**ಬಾಲಕರಿಲ್ಲದ ಬಾಲಿದ್ಯಾತರ ಜನ್ಮ**
**ಬಾಡಿಗಿ ಎತ್ತು ದುಡಿದ್ಹಾಂಗ।**
**ಬಾಳೆಲೆಯ ಹಾಸ್ಯುಂಡು ಬೀಸಿ ಒಗೆದ್ಹಾಂಗ॥**

ಈ ತ್ರಿಪದಿಯನ್ನು ನೋಡಿ: 'ಬಾಲಕರಿಲ್ಲದ ಬಾಲಿದ್ಯಾತರ ಜನ್ಮ' ಎನ್ನುವ ವಾಕ್ಯಕ್ಕೆ ಪೂರಕವಾಗಿ 'ಬಾಡಿಗಿ ಎತ್ತು ದುಡಿದ್ಹಾಂಗ' ಬಾಳೆಲೆಯ ಹಾಸ್ಯುಂಡು ಬೀಸಿ ಒಗೆದ್ಹಾಂಗ' ಎನ್ನುವ ವಾಕ್ಯಗಳು. ವಾಸ್ತವವಾಗಿ ಮೊದಲನೆಯ ವಾಕ್ಯಕ್ಕೆ ಪೂರಕವಾಗಿ ಅನಂತರದ ಎರಡು ಸಾಲುಗಳು ಬಂದಿವೆಯೆಂದು ನಾವು ಪರಿಭಾವಿಸಿದರೂ ಅದು ಹಾಗೆಯೇ ಆಗಿರಬೇಕಾಗಿಲ್ಲ. ಮೂರು ವಿಷಯಗಳ ಪ್ರತಿಪಾದನೆಯು ಈ ತ್ರಿಪದಿಯಲ್ಲಿದೆ.

೧. ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
೨. ಬಾಡಿಗೆಯ ಎತ್ತು ದುಡಿದ ಹಾಗೆ
೩. ಬಾಳೆಲೆಯಲ್ಲಿ ಉಂಡು ಎಲೆಯನ್ನು ಬಿಸಾಡಿದ ಹಾಗೆ.

ಇವು ಪರಸ್ಪರ ಸಂಯೋಜನೆಗೆ ಒಳಪಟ್ಟು ಒಂದು ರಚನಾ ಕ್ರಮವಾಗಿದೆಯೆಂದು ನಾವು ಭಾವಿಸುತ್ತೇವೆ. ಈ ಸಂಯೋಜನೆಯನ್ನು ಬಿಡಿಸಿಕೊಂಡು ಬೇರೆ ಬೇರೆ ಪದಗಳನು ಇಟ್ಟು ನೋಡೋಣ ೧. ಬಾಲಕರು ೨. ಇಲ್ಲದ ೩. ಬಾಲೆ ೪. ಯಾತರ ೫. ಆನ್ಮ ೬.ಬಾಡಿಗೆ ೭. ಎತ್ತು ೮. ದುಡಿದ ೯. ಹಾಗೆ ೧೦. ಬಾಳೆ ೧೧. ಎಲೆ ೧೨. ಉಂಡು ೧೩. ಬೀಸಿ ೧೪. ಉಂಡು ಇತ್ಯಾದಿ. ಈ ಎಲ್ಲಾ ಪದಗಳನ್ನು ಬಿಡಿಸಿ ನಿಘಂಟುವಿನಲ್ಲಿ ಅರ್ಥವನ್ನು ಹುಡುಕಿದರೆ ಬೇರೆ ಬೇರೆ ಅರ್ಥಗಳು ದೊರೆಯುತ್ತವೆ. ಈ ತ್ರಿಪದಿಯನ್ನು ಓದುವಾಗ ಈಗಾಗಲೇ ರಚನೆಯೆಂದು ಪೂರ್ಣಗೊಂಡಿದೆಯೆಂದು ನಾವು ಓದುವುದಿಲ್ಲ ಮತ್ತು ಅದು ಹೇಗೆ ಸುಸಂಘಟಿತವಾಗಿದೆಯೆಂದೂ ತಿಳಿದುಕೊಳ್ಳುವುದಿಲ್ಲವೋ ಹಾಗೆಯೇ ಈ ತ್ರಿಪದಿಯ ಆಂತರಿಕ ಪಠ್ಯವು ಭಾಷಿಕವಾಗಿಯೆ ಹೊರಹೊಮ್ಮಿದೆ ಎಂದು ತಿಳಿಯಬೇಕಿಲ್ಲ. ಇದಿಷ್ಟೇ ಅಲ್ಲ, ಭಾಷಿಕ ವ್ಯವಹಾರದ ದೃಷ್ಟಿಯಿಂದ ಮಾತ್ರವೇ ಈ ಅಭಿವ್ಯಕ್ತಿಯು

ಸ್ವಯಂಸಂಪೂರ್ಣವೆಂದು ಕರೆಯುವಂತಿಲ್ಲ, ಕನ್ನಡದಲ್ಲಿ ಈ ರೀತಿಯ ಮಾತುಗಳು ಕೇವಲ ಭಾಷಿಕ ಮಟ್ಟದ ವ್ಯವಹಾರವಾಗಿ ಉಳಿದಿಲ್ಲ. ಒಟ್ಟಿನಲ್ಲಿ ನಿಘಂಟಿನ ಅರ್ಥವ್ಯಾಪ್ತಿಯು ಹೇಗಿದೆಯೋ ಅದೇ ರೀತಿಯಲ್ಲಿ ಪರಿಕಲ್ಪನಾತ್ಮಕ ಸ್ವರೂಪವೂ ಇದೆ.

### ಪ್ರಯೋಗ ೨

ನಾವು ಸಾಮಾನ್ಯವಾಗಿ ಹುಡುಗಿಯರಿಗೆ 'ಕೋಮಲೆ' ಎಂದು ಕರೆಯುತ್ತೇವೆ. ಮೂಲ ರೂಪದಲ್ಲಿ ಕೋಮಲೆ ಎನ್ನುವುದು 'ಕೋಮಳ' 'ನಳನಳಿಕೆ' 'ಸುಂದರ' ಎಂಬ ಪದದಿಂದ. ಕೆಸರಿನಲ್ಲಿ ಹುಟ್ಟುವ ಹೂವು. (ಮಲ–ಕೆಸರು) ಅದಕ್ಕೆ 'ಕೋ' ಬಂದು ಅರ್ಥವನ್ನು ಬದಲಾಯಿಸಿದೆ. ಮೂಲರೂಪಕ್ಕೆ ಹಿಂದಿರುಗಿದರೆ ಅದರ ನೆಲೆಯೇ ಬೇರೆಯಾಗಿ ಬಿಡುತ್ತದೆ. ಹೀಗೆ ಮೂಲ ತಾತ್ತ್ವಿಕ ನೆಲೆಯು 'ಪಠ್ಯ'ದೊಳಗಡೆ ಬಂದಾಗ ಅರ್ಥವನ್ನು ಬದಲಾಯಿಸುವುದು ಮಾತ್ರವಲ್ಲ. ಅದಕ್ಕೆ ಹೊಸ ಅರ್ಥವಂತಿಕೆಯನ್ನು ಕೊಡುತ್ತದೆ. ಕೋಮಲ ಕೆಸರಿನಲ್ಲಿ ಹುಟ್ಟಿದ್ದು: ಇದು ಪದದ ಹಿಂದಿರುವ ಮೂಲ ತಾತ್ತ್ವಿಕ ಪರಿಕಲ್ಪನೆಯಾಗಿದೆ. ಇದು ಮೊದಲ ನೆಲೆ ಎನ್ನಬಹುದು. 'ಅವಳು ಕೋಮಲೆ', ಈ ವಾಕ್ಯದಲ್ಲಿ ಕೋಮಲೆಯು ಕೆಸರಿನಲ್ಲಿ ಹುಟ್ಟಿದವಳಲ್ಲ, ಸುಂದರಿ. ಹೀಗೆ ಪರಿವರ್ತನೆ ಯಾಗುತ್ತದೆ. ಈ ರೀತಿಯ ಸಂದರ್ಭ ಮೂಲ ಸೂಚನೆಯು ಪರಿವರ್ತನೆ ಹೊಂದಿ ಎರಡನೆಯ ಅರ್ಥವಂತಿಕೆಯನ್ನು ಹೊಂದುವುದು ಮಾತ್ರವಲ್ಲ ಆಯಾ ಸಂದರ್ಭಕ್ಕೆ ಅನುಸಾರವಾಗಿ ಅರ್ಥವನ್ನು ಕಂಡುಕೊಳ್ಳುತ್ತದೆ. ಇದನ್ನೇ ಡೆರಿಡಾ ಅಂತರ (Difference) ಎಂದು ಕರೆಯುತ್ತಾನೆ. ಸಾಹಿತ್ಯಿಕವಾಗಿ ಒಂದು ಪದಕ್ಕೆ ಒಂದು ನಿದೇಶನಾತ್ಮಕವಾದ

ಅರ್ಥವು ಪ್ರಾಪ್ತವಾಗುತ್ತದೆ. ಮೂಲ ಅರ್ಥ; ಅದರ ಹಿಂದಿರುವ ತತ್ತ್ವ, ಅದರ ನಂತರ ಬರಹಗಾರನ ಆಲೋಚನೆ, ಅದು ಬರಹ ರೂಪಕ್ಕೆ ಇಳಿಯುವ ಪ್ರಕ್ರಿಯೆ ಹೀಗೆ ಅನೇಕ ವ್ಯತ್ಯಾಸಗಳು ಕಾಣಿಸಿಕೊಳ್ಳುತ್ತವೆ. ಅದರ ಜೊತೆ 'ಪಠ್ಯ'ವೊಂದನ್ನು ಓದುವ ಓದುಗ ಅರ್ಥವಿಸಿಕೊಳ್ಳುವ ನೆಲೆ, ಇದಿಷ್ಟು ಅನೇಕ ಪಲ್ಲಟಗಳನ್ನು ಕಂಡುಕೊಳ್ಳುತ್ತದೆ.

## ಪ್ರಯೋಗ ೩

ಕನ್ನಡದ ನವ್ಯ ವಿಮರ್ಶಕರಲ್ಲಿ ಒಬ್ಬರಾದ ಎಚ್.ಎಂ.ಚನ್ನಯ್ಯನವರ ವಿಮರ್ಶೆಯ ನಿಲುವನ್ನು ಇಲ್ಲಿ ಉದಾಹರಿಸಬಹುದು: 'ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೇ ಬೇಕು ದಕ್ಕ ನುಂಗಿದಂತೆ ಬೆರೆದುಕೊಂಡಿಬೇಡಿ ಬೀಗಿ ಬೆಳೆದಗೊನೆವಾಳೆಯಂತೆ ಬಾಗಿಕೊಂಡಿದ್ದರೆ ಬೇಡಿದ ಪದವಿಯನೀವ ಕೂಡಲ ಸಂಗಮದೇವ' ಇಲ್ಲಿ ಬರುವ 'ದಕ್ಕು' ಎಂಬ ಪದದ ಔಚಿತ್ಯವನ್ನು ಗಮನಿಸಬೇಕು; ಹಾಗೆಯೇ ತಕ್ಷಣ ಬರುವ 'ನುಂಗು' ಎಂಬ ಪದ. 'ದಕ್ಕು' ಎಂಬ ಪದದ ಅರ್ಥ 'ನೇರವಾದ ಗೂಟ' ಎಂದು. ಅದೇ ಅರ್ಥ ಬರುವ ಬೇರೆ ಬೇರೆ ಪದವನ್ನು ಬಳಸಲಾಗಿದೆ. ಈ ಪದಕ್ಕೆ 'ಆಸ್ತಿ' ಎಂಬ ಅರ್ಥವೂ ಇದೆ ಎಂಬುದು ಗಮನಾರ್ಹ. ಆ ಪದವನ್ನು ಉಚ್ಚರಿಸುತ್ತಿದ್ದಂತೆ 'ಗುಕ್ಕು' ನೆನಪಾಗಿ, ಅನ್ನದ ಗುಕ್ಕನ್ನು ನುಂಗುವಂತೆ ಗುಳಕ್ಕನೆ ದಕ್ಕನ್ನು ನುಂಗುವ ಕ್ರಿಯೆ ತೋರಿಬರುವಂತಾಗುತ್ತದೆ. ಹಾಗೆ 'ದಕ್ಕ'ನ್ನು ನುಂಗಿ 'ಬೆರೆದುಕೊಂಡು' ಅಹಂಕಾರದಿಂದ ಮೆರೆದರೆ, ಬಾಗುವುದನ್ನು ಕಲಿಯದೆ ಹೋದರೆ ಒಲಿಯಲಾರ ಕೂಡಲ ಸಂಗಮದೇವ. 'ಬೀಗಿ ಬೆಳೆದ ಗೊನೆಬಾಳೆ' ಎನ್ನುವಾಗ ಬಾಳೆಯ ಆರೋಗ್ಯದಿಂದ ಕೂಡಿದ, ಪುಷ್ಟಿಯಾದ ಬೆಳವಣಿಗೆಯ ಅನುಭವವಾಗುತ್ತದೆ. ಬೀಗಿ ಬೆಳೆದಿದೆ ಅದು ಸಂಪೂರ್ಣ ಪರಿಪಕ್ವ ಸ್ಥಿತಿ ಅಲ್ಲಿದೆ; ಎಲ್ಲ ಇದೆ ಎಂಬ ಭಾವ ಇದೆ; ಅದು 'ಬೀಗಿದ್ದರೂ' ಕೂಡ 'ಬಾಗಿ' ಕೊಂಡಿದೆ. ಹೀಗೆ 'ಬೀಗಿ' 'ಬಾಗಿ'ದ್ದರೆ ಬೇಡಿದ ಪದವಿಯನೀವ ಕೂಡಲಸಂಗಮದೇವ' 'ಬೀಗು' 'ಬಾಳೆ' 'ಬಾಗು' 'ಬೇಡು' ಈ ಪದಗಳ ಔಚಿತ್ಯ ಪೂರ್ಣ ಪ್ರಯೋಗದಿಂದ ಬೀಗಿದರೂ 'ಬಾಳೆ' 'ಬಾಗಿರುವ' ಆ ಮೇಲೆ ಹಾಗಿದ್ದರೆ 'ಬೇಡಿದ ಪದವಿಯ ನೀವ ಕೂಡಲ ಸಂಗಮದೇವ' ಎನ್ನುವ ಭಾವದ ಬೆಳವಣಿಗೆ,

'ಬೀಗಿ'ನಲ್ಲಿ ಪ್ರಾರಂಭವಾಗಿ 'ಬೇಡು'ವಿನಲ್ಲಿ ಇಳಿದು 'ಕೊಡು'ವಲ್ಲಿ ಕೊನೆಯಾಗುತ್ತದೆ. 'ಬೀಗಿ'ದಲ್ಲಿನಿಂದ 'ಬಾಗು'ವಲ್ಲಿನ ಕ್ರಿಯೆ ಕಣ್ಣು ಮುಂದೆ ಕಟ್ಟುತ್ತದೆ. ಇದು ವಚನದ ಮೊದಲ ಭಾಗವಾದ ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೇಬೇಕು ಎನ್ನುವುದಕ್ಕೆ ಸೇರಿಕೊಂಡು, ಜಂಗಮಕ್ಕೆ ಭಾಗ ಬೇಕು, ಕೂಡಲಸಂಗಮ ಒಲಿಯಬೇಕಾದರೆ, ಎಂಬ ಭಾವ ಪುಷ್ಟಿಗೊಳ್ಳುತ್ತದೆ. (ಶಿವರುದ್ರಪ್ಪ ಜಿ.ಎಸ್.(ಸಂ), ೧೯೯೪, ವಿಮರ್ಶೆಯದಾರಿ, ಪು. ೫೨-೫೩) ಇಲ್ಲಿ ಚೆನ್ನಯ್ಯನವರು ಬಳಸಿಕೊಳ್ಳುವ ಪರಿಕರವು ನವ್ಯ ವಿಮರ್ಶೆಯದಾಗಿದ್ದು ವಚನವೊಂದರಲ್ಲಿ ಇರುವ ಪದದ ಬಗೆಗಿನ tension ಗಳಿಗೆ

ಹೆಚ್ಚಿನ ಅವರು ಒತ್ತನ್ನು ಕೊಟ್ಟಿದ್ದರೆ. ಚೆನ್ನಯ್ಯನವರು ಈ ವಚನದ ಭಾಷೆಯು ದಿನನಿತ್ಯದ ಭಾಷೆಯ ಮಾದರಿಯಲ್ಲಿ ಇಲ್ಲ. ಭಾಷಿಕ ಕ್ರಮಕ್ಕೆ ವಿಶಿಷ್ಟ ಸಂಕೇತವಿದ್ದು ಭಿನ್ನವಾದ ಪ್ರಸಕ್ತಿಯು ರೂಪುಗೊಂಡಿದೆಯೆಂದು ಪರಿಭಾವಿಸುತ್ತಾರೆ. ವಚನವೊಂದರ ಭಾಷೆಯು ಅದರೊಳಗಡೆಗೆ ಸ್ವಾಯತ್ತವಾಗಿದ್ದು, ಕೃತಿಯನ್ನು ಹೆಚ್ಚು ನಿಕಟವಾಗಿ ಓದುವುದರ ಮುಖಾಂತರ 'ನಿರ್ದಿಷ್ಟ ಅರ್ಥವನ್ನು' ಭಿನ್ನವಾಗಿ ಗ್ರಹಿಸಬಹುದು ಎಂದು ಭಾವಿಸಿ ಕೊಂಡಂತಿದೆ. ನವ್ಯ ವಿಮರ್ಶೆಯ ಅನುಭವ ಮತ್ತು ಭಾಷೆಯ ನಡುವಣ ಸಂಬಂಧವನ್ನು ಕುರಿತು ಪ್ರಸ್ತಾವಿದ್ದು ಸರಿಯಷ್ಟೇ. 'ಭಾಷೆಯ ಅರ್ಥಶಕ್ತಿಯನ್ನು ನವ್ಯಕಾವ್ಯವು ಪುನರ್ರಚಿಸಿಕೊಳ್ಳುವುದಕ್ಕೆ ಕಾರಣವಿದೆ. ವ್ಯಾವಹಾರಿಕ ಭಾಷೆ ಸಮೂಹದ ಭಾಷೆ. ಅದು ಪ್ರಜ್ಞಾಪೂರ್ವಕ ನೆಲೆಯ ಭಾವ. ಅನುಭವಗಳ ಅಭಿವ್ಯಕ್ತಿಗೆಯ ಬಳಕೆಯಾಗುವ ಭಾಷೆ. ವ್ಯಕ್ತಿ ವಿಶಿಷ್ಟವಾದ ಅನುಭವವನ್ನು ಅದರೆಲ್ಲಾ ಸಂಕೀರ್ಣತೆಯಲ್ಲಿ ಅಭಿವ್ಯಕ್ತಿಸಬೇಕಾದ ಒತ್ತಡ ಅದಕ್ಕೆ ಇರುವುದಿಲ್ಲ. ಆದ್ದರಿಂದ ವ್ಯಕ್ತಿವಿಶಿಷ್ಟವಾದ ಅನುಭವವನ್ನು ಅದರಲ್ಲಿ 'ಶಂಕೆ' 'ಸಂದಿಗ್ಧ' 'ಸಮ್ಮೋಹ'ಗಳ ಸಂಕೀರ್ಣತೆ, ನಿಗೂಢತೆಗೊಂದಿಗೆ ಅಭಿವ್ಯಕ್ತಿಸುವ ಸೃಜನಶೀಲಳ ಒತ್ತಡ ಕವಿಗೆ ಉಂಟಾದಾಗ ಬಾಷೆಯ ವ್ಯಾವಹಾರಿಕ ಅರ್ಥಶಕ್ತಿಯು ತಕ್ಷಣ ಸಾಲದಾಗುತ್ತದೆ'. (ಜಿ.ಎಚ್.ನಾಯಕ್. ಹೊಸಗನ್ನಡ ಕವಿತೆ ಸಂಕಲನದ ಮುನ್ನುಡಿಯಿಂದ) ಜಿ. ಎಚ್. ನಾಯಕರು ತಮ್ಮ ಮಾತುಗಳಲ್ಲಿ 'ಅನುಭವ' 'ವ್ಯಾವಹಾರಿಕ ಭಾಷೆ' 'ಕಾವ್ಯಭಾಷೆ' ಇತ್ಯಾದಿಗಳನ್ನು ತರುತ್ತಾರೆ. ಆ ಅನುಭವ ಎನ್ನುವುದಕ್ಕೆ ಅವರು ಒಂದು ಮಿತಿಯನ್ನೂ ಹೇರುತ್ತಾರೆ. ಕಾವ್ಯ ಭಾಷೆ ಬೇರೆ–ವ್ಯಾವಹಾರಿಕ ಭಾಷೆ ಬೇರೆ– ಅನುಭವ ಬೇರೆಯೆಂಬ ಈ ರೀತಿಯ ಪರಿಕಲ್ಪನೆಗಳನ್ನು ನಿರಚನವು ತಿರಸ್ಕರಿಸುತ್ತದೆ. ಆದರೆ ಈ ಅನ್ವಯವು ಮೂಲಭೂತವಾಗಿ ನಿರ್ಣಯವನ್ನು ಹೇಳುತ್ತದೆ. ನಿರಚನವು ಈ ಮಾದರಿಯ ನಿರ್ಣಯವನ್ನು ವಿರೋಧಿಸುತ್ತದೆ.

ಒಂದು ಪಠ್ಯಕ್ಕೆ ನಾವು ಅನ್ವಯಿಸುವ ಕ್ರಮದಂತೆ ಡೆರಿಡಾ ಹೇಳುತ್ತಾನೆ. ಯಾವಾಗಲೂ ಎರಡು ಪಠ್ಯಗಳಿರುತ್ತವೆ. ಎರಡು ಕೈಗಳಿರುತ್ತವೆ, ಎರಡು ದರ್ಶನಗಳಿರುತ್ತವೆ. ಎರಡು ದಾರಿಯಲ್ಲಿ ಕೇಳಲು ಸಾಧ್ಯವಿರುತ್ತದೆ. ಈ ಪ್ರಕ್ರಿಯೆಯು ಏಕಕಾಲಕ್ಕೆ ಸಂಭವಿಸುತ್ತದೆ ಮತ್ತು ಬೇರೆ ಬೇರೆಯಾಗಿಯೂ ಇರುತ್ತದೆ.

ನಿರಚನವೆಂದರೆ 'ಹೀಗೆ' ಎಂದು ಕರೆಯುವುದು ಕಷ್ಟ. ನಿರಚನ ಸಿದ್ಧಾಂತವು ಪದಗಳ ಮೂಲ ತಾತ್ತ್ವಿಕ ಪರಿಭಾಷೆ; ಆಲೋಚನೆ; ಮಾತು; ಬರವಣಿಗೆ; ಬರವಣಿಗೆಯ ಹಿಂಸೆ; ಅದರ ಅರ್ಥ; ಅರ್ಥವಿಸಿಕೊಳ್ಳುವ ಸಂದರ್ಭದಲ್ಲಿ ನಾವೇ ನಿರ್ಮಿಸಿಕೊಳ್ಳುವ ಪಠ್ಯ ಇತ್ಯಾದಿ ಅನೇಕ ಅಂಶಗಳನ್ನು ಒಳಗೊಂಡಿದೆ ಎನ್ನಬಹುದು.

* * *

# ಗೀತಾಂಜಲಿ ಪುಸ್ತಕ ಪ್ರಕಾಶನ

ಕಂದಾಯ ಭವನ, ನೂರಡಿ ರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪
ಮತ್ತು
ದೊಣೆಹಳ್ಳಿ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ -೫೭೭೫೨೮.
ಮೊ : ೯೪೪೯೮೮೬೩೯೦, ೯೯೧೬೧೯೭೨೯೧

* ಸೀಮೋಲ್ಲಂಘನ – ಭಾಗ–೧ / [ಅಂಕಣ ಬರಹ] ಸುಧೀಂದ್ರ ಬುಧ್ಯ ೧೫೦/-
* ಸೀಮೋಲ್ಲಂಘನ – ಭಾಗ–೨ / [ಅಂಕಣ ಬರಹ] ಸುಧೀಂದ್ರ ಬುಧ್ಯ ೧೫೦/-
* ಗರಡಿ ವೀರರು / [ಕುಸ್ತಿ ಕಥನ] ವಿಜಯ ಕರ್ನಾಟಕ ದಾವಣಗೆರೆ ತಂಡ ೮೦/-
* ಸ್ತ್ರೀವಾದಿ ಚಿಂತಕಿಯರ ಪ್ರವೇಶಿಕೆ [ಸ್ತ್ರೀವಾದಿ ಚಿಂತನೆಗಳ ಬರಹ] ೧೦೦/-
* ಬಹುತ್ವ ಕಥನ [ಮೂಡ್ನಾಕೂಡು ಚಿನ್ನಸ್ವಾಮಿ–೬೫] ಸಂ: ಸುಭಾಷ್ ರಾಜಮಾನೆ ೫೦೦/-
* ಮೋಡ, ಮಳೆ ಮತ್ತು ಬೆಳೆ / [ವಿಜ್ಞಾನ] ಡಾ. ಎ. ಎಸ್. ಕುಮಾರಸ್ವಾಮಿ ೨೦೦/-
* ದೇವರ ನಾಲಿಗೆಯನ್ನು ಸೀಳುವ ಕಥನ / [ಗಾಂಧೀಜಿ ಚಿಂತನೆ ಹಿನ್ನಲೆಯ ಲೇಖನಗಳು] ಡಾ. ರಾಜೇಗೌಡ ಹೊಸಹಳ್ಳಿ ೧೦೦/-
* ದಲಿತ ಸಾಹಿತ್ಯ ಯಾನ / ಅರವಿಂದ ಮಾಲಗತ್ತಿ ೧೨೦/-
* ಹಲಗೆ ಮತ್ತು ಮೆದು ಬೆರಳು / [ಕವನ ಸಂಕಲನ] ಕಾದಂಬಿನಿ ೩೦೦/-
* ಸಾಹಿತ್ಯ ವಿಮರ್ಶೆಯಲ್ಲಿ ಸ್ವೀಕಾರ ಮತ್ತು ಪ್ರತಿರೋಧ / [ವಿಮರ್ಶೆ]/ ಡಾ. ಕೇಶವ ಶರ್ಮ ಕೆ.೨೨೦/-
* ಕನ್ನಡ ಕಾದಂಬರಿ ಶಾಸ್ತ್ರ / [ವಿಮರ್ಶೆ] / ಡಾ. ಕೇಶವ ಶರ್ಮ ಕೆ. ೧೦೦/-
* ತುರಂಗ ಭಾರತ ಕಥಾ ತರಂಗ / ಕೂಡಲಿ ಜಗನ್ನಾಥ ಶಾಸ್ತ್ರಿ ೩೫೦/-
* ಇರಾನಿನ ವೀರರು ಮತ್ತು ಇತರ ಕಾದಂಬರಿಗಳು / ಭಾರತಿಸುತ ೩೫೦/-
* ಚಿಂಬ ಹಿಡಿದ ಮೀನು ಮತ್ತು ಇತರ ಕಥೆಗಳು / ಭಾರತಿಸುತ ೨೨೦/-
* ಲಕ್ಷ್ಮೀಶ ಕವಿಯ ಕನ್ನಡ ಜೈಮಿನಿ ಭಾರತ ಕೈದೀವಿಗೆ [ಗದ್ಯ–ಪದ್ಯ–ತಾತ್ಪರ್ಯ] / ಕೆ.ಆರ್. ಕೃಷ್ಣಯ್ಯ ೬೦೦/-
* ರಾಷ್ಟ್ರಧ್ವಜ / ಸಿದ್ದಪ್ಪ ಹಾಲಿವಾಣ ೫೦/-
* ಕುವೆಂಪು ಭಾವಸೂಕ್ತಿ / ಶ್ವೇತ ಸಿ. ೫೦/-
* ನೀಂ ಮಹಚ್ಚಿಲ್ಪಿ ದಿಟಂ / [ಕುವೆಂಪುವಿನ ರಾವಣ] / ಡಾ. ಜಿ. ಪ್ರಶಾಂತನಾಯಕ ೧೦೦/-
* ಕೆಂಡಕೊಂಡಕೆ ಋಣವಾದೆ / [ಜಾನಪದ ಕಾವ್ಯ] / ಅನಿತಾ ಹೆಗ್ಗೋಡು ೧೦೦/-
* ನೀವು ನಿಜಕ್ಕೂ ಸುಖವಾಗಿದ್ದೀರಾ ? / [ವ್ಯಕ್ತಿತ್ವ ವಿಕಾಸನ] / ನಡಹಳ್ಳಿ ವಸಂತ ೨೦೦/-
* ಪದಸಂತತಿ / [ ಪ್ರಬಂಧಗಳು] / ಡಾ. ಶುಭಮರವಂತೆ ೧೨೦/-
* ಗದ್ಯಂ ಹೃದ್ಯಂ/ [ಅಂಕಣ ಬರಹಗಳು] / ಅಶೋಕ ಶೆಟ್ಟರ್ ೨೩೦/-
* ರಂಗ ಚೈತ್ರ / [ಅಂಕಣ ಬರಹಗಳು] / ಗುಡಿಹಳ್ಳಿ ನಾಗರಾಜ ೮೦/-
* ಜನಪರ ರಂಗಭೂಮಿ / [ಅಂಕಣ ಬರಹಗಳು] / ಗುಡಿಹಳ್ಳಿ ನಾಗರಾಜ ೧೨೦/-
* ಭಾರತೀಯ ಚಿತ್ರಕಲೆ / ಡಾ. ಕೆ. ಶಿವರಾಮಕಾರಂತ ೧೮೦/-
* ಪಕ್ಷಿಗಳ ಅಧ್ಭುತ ಲೋಕ / [ವಿಜ್ಞಾನ] ಡಾ. ಕೆ. ಶಿವರಾಮಕಾರಂತ ೨೦೦/-*
* ಗ್ನಾನ / [ಹರಟೆ ಮತ್ತು ವಿಡಂಬನೆಗಳು] ಡಾ. ಕೆ. ಶಿವರಾಮಕಾರಂತ ೧೫೦/-

* ರಂಗಪ್ಪನ ಗೊಂಬೆ ಹಾಗೂ ಇತರೆ ಕತೆಗಳು/ ಡಾ. ಕೆ.ಶಿವರಾಮ ಕಾರಂತರ ಸಣ್ಣಕತೆಗಳು೧೦೦/-
* ಮೈಗಳ್ಳನ ದಿನಚರಿಯಿಂದ/ಶಿವರಾಮ ಕಾರಂತರ ಹರಟೆ ಮತ್ತು ವಿಡಂಬನೆಗಳು ೮೦/-*
* ಹಸಿವು ಭಾಗ-೧/ಶಿವರಾಮ ಕಾರಂತರ ಸಣ್ಣ ಕತೆಗಳು ೭೫/-
* ಹಾವು ಮತ್ತು ಕವಿಕರ್ಮ ಭಾಗ - ೨/ಶಿವರಾಮ ಕಾರಂತರ ಸಣ್ಣ ಕತೆಗಳು ೧೦೦/-
* ತೆರೆಯ ಮರೆಯಲ್ಲಿ ಭಾಗ - ೩/ಶಿವರಾಮ ಕಾರಂತರ ಸಣ್ಣ ಕತೆಗಳು ೫೦/-
* ವಚನಕಾರರು ಮತ್ತು ಅಂಬೇಡ್ಕರ್/ವಿಮರ್ಶೆ/ಡಾ. ಜಿ.ಪ್ರಶಾಂತ ನಾಯಕ ೧೦೦/-
* ಅಂಬೇಡ್ಕರ್ ಮತ್ತು ಕುವೆಂಪು/ವಿಮರ್ಶೆ/ಡಾ. ಜಿ.ಪ್ರಶಾಂತ ನಾಯಕ ೧೦೦/-
* ಗದ್ದೆಯಂಚಿನ ದಾರಿ/ಲಲಿತ ಪ್ರಬಂಧ/ಎಲ್.ಸಿ. ಸುಮಿತ್ರ ೧೨೦/-
* ಹಗಲುಕಗ್ಗೊಲೆ ಮಾನ್ಯ ರಾಜಾ ಮತ್ತಿ ತಿಮ್ಮಣ್ಣ ನಾಯಕ/ ಐತಿಹಾಸಿಕ ಕಾದಂಬರಿ / ಡಾ. ಬಿ.ಎಲ್. ವೇಣು ೪೦೦/-
* ಹೊನ್ನ ಹೊಳೆಯ ಅರಸು ಮತ್ತು ಇತರ ಕಥೆಗಳು/ ಮಕ್ಕಳ ಕಥೆಗಳು/ ಭಾರತೀಸುತ ೨೫೦/-
* ರಾಷ್ಟ್ರೀಯ-ಹಬ್ಬಗಳು, ದಿನಾಚರಣೆಗಳು/ ಶಕುಂತಲ ಯು. ೧೪೦/-
* ಹಿರಿಯರ ಹಾದಿ-೩/ (ಸ್ಫೂರ್ತಿದಾಯಕ ಕಿರುಕತೆಗಳು)/ ಪ್ರೊ. ಎಂ.ಎನ್.ಸುಂದರರಾಜ್೧೫೦/-
* ಹಿರಿಯರ ಹಾದಿ-೪/ (ಸ್ಫೂರ್ತಿದಾಯಕ ಕಿರುಕತೆಗಳು)/ ಪ್ರೊ. ಎಂ.ಎನ್.ಸುಂದರರಾಜ್೧೫೦/-
* ಬಸವಣ್ಣ ಮತ್ತು ವರ್ತಮಾನ ಬದುಕು/ ಡಾ. ವಸಂತ ಕುಮಾರ್ ೨೦೦/-*
* ಕೃಷಿ ಸಂರಕ್ಷಣೆ/ ಡಾ. ಹೆಚ್.ಎಸ್. ವಿರೂಪಾಕ್ಷಪ್ಪ ೨೯೦/-
* ಮನಮಲ್ಲಿಗೆ/ ಮಾನಸಿಕ ಆರೋಗ್ಯಕ್ಕೆ ಸಂಬಂಧಿಸಿದ ಲೇಖನಗಳು / ಡಾ.ಕೆ. ಎಸ್. ಪವಿತ್ರ ೧೬೦/-
* ವಿಜ್ಞಾನ ಪರಂಪರೆಗೆ ಪ್ರಾಚೀನ ಭಾರತೀಯರ ಕೊಡುಗೆಗಳು/ ಡಾ. ಟಿ. ನಿರಂಜನ ಪ್ರಭು ೬೦/-
* ಏಳುಕೊಳ್ಳ-ಏಳುಕೋಟಿ/ ವಿಮರ್ಶೆ / ಡಾ. ಮಂಜುನಾಥ್ ಬೇವಿನಕಟ್ಟೆ ೧೫೦/-*
* ಅರಳು ಮನಸ್ಸು/ ಮಾನಸಿಕ ಆರೋಗ್ಯಕ್ಕೆ ಸಂಬಂಧಿಸಿದ ಲೇಖನಗಳು / ಡಾ.ಕೆ.ಎಸ್. ಪವಿತ್ರ ೧೫೦/-
* ಯಕ್ಷರಂಗ ದರ್ಶನ/ಯಕ್ಷರಂಗ ಕಲಾವಿದರ ಪರಿಚಯ/ಸತೀಶ.ಜಿ.ನಾಯ್ಕ ಮಹಿಮೆ ೨೨೦/-
* ಅಂತರ್ಜಾಲ ಬಳಕೆ/ಡಾ. ಎ.ಎಸ್.ಕುಮಾರಸ್ವಾಮಿ ೩೫೦/-
* ನಿಚ್ಚಂಪೊಸತು/ಡಾ. ಕುಮಾರಚಲ್ಯ ೧೩೦/-
* ಮಹಾವೀರ ಮಡಿವಾಳ ಮಾಚಿದೇವ/ ಕಾದಂಬರಿ/ ಜಿ.ವಿ.ಸಂಗಮೇಶ್ವರ ೩೮೦/-
* ಹೊನ್ನಾಳಿ ಹೊಡ್ತ / ವಿಮರ್ಶೆ / ಡಾ. ಚನ್ನೇಶ್ ಹೊನ್ನಾಳಿ ೨೮೦/-
* ಹೊನ್ನಾಳಿ ಸೀಮೆಯ ಕಥನ ಸಾಹಿತ್ಯ/ ಕಥಾ ಸಂಕಲನ / ಡಾ.ಚನ್ನೇಶ ಹೊನ್ನಾಳಿ ೨೪೦/-
* ಕಬೀರದಾಸರ ಕನ್ನಡ ದೋಹೆಗಳು/ಇಟಗಿ ಈರಣ್ಣ ೧೦೦/-
* ಕನ್ನಡ ಶಾಯಿರಿಗಳು/ಇಟಗಿ ಈರಣ್ಣ ೧೫೦/-
* ಇಂಡಿಯಾದೊಳಗೊಂದು ಇಣುಕು/ ಪ್ರವಾಸಿ ಕಥನ /ಡಾ.ಜಿ.ಕೆ.ರಮೇಶ ೧೬೦/-
* ಸಮಾನತೆಯ ಶಿಲ್ಪಿ ಡಾ. ಬಾಬಾಸಾಹೇಬ್ ಅಂಬೇಡ್ಕರ್/ಗೊಪಜ್ಜಿ ನಾಗಪ್ಪ ೭೫/-
* ಸರಳ ಛಂದಸ್ಸು/ಡಾ. ಕುಮಾರಚಲ್ಯ ೧೮೦/-
* ದಲಿತಚರಿತ್ರೆ ರಚನೆಯಲ್ಲಿ ಕಾಡಲೇಬೇಕಾದ ಪ್ರಶ್ನೆಗಳು.../ಡಾ.ಎನ್.ಚಿನ್ನಸ್ವಾಮಿ ಸೋಸಲೆ ೨೪೦/-
* ಸುಲಭದಲ್ಲಿ ತಕ್ಷಣ ಚಿಕಿತ್ಸೆ [ಆಯುರ್ವೇದ ಚಿಕಿತ್ಸಾ ಮಾರ್ಗದರ್ಶಿ] / ದಿ.ಪ. ಮಂಗರಸಿ ೮೦/-

* ನಿತ್ಯನೂತನ ಗಾದೆಗಳು/ (೨೫೦ ಗಾದೆಗಳು ವಿವರಣೆಯೊಂದಿಗೆ)
ಸಂ. ತುರುವನೂರು ಮಲ್ಲಿಕಾರ್ಜುನ, ದೀಪಾಕುಬಸದ್ ೧೦೦/-
* ವಿಜ್ಞಾನ ಸಾಮಾನ್ಯ ಜ್ಞಾನ ಪ್ರಶ್ನೋತ್ತರಗಳು/ಎಸ್.ಟಿ. ರಜನಿಕಾಂತ (ಟಿ.ಆರ್.ಕೆ) ೮೦/-
* ಆ ಬದಿಯ ಹೂವು/ದೀಪ್ತಿ ಭದ್ರಾವತಿ ೯೦/-
* ನ್ಯಾಯದಾನದ ಪೀಠದಿಂದ/(ಅನುವಾದ) ಮಾಣಿಕ್ ಪಟವರ್ಧನ್ ೨೨೦/-
* ಪ್ರಾಯೋಗಿಕ ವಿಮರ್ಶೆ
ಪ್ರ.ಸಂ: ಡಾ.ಜಿ.ಎಸ್. ಶಿವರುದ್ರಪ್ಪ. ಸಂ. ಡಾ.ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ ೧೮೦/-
* ಬುದ್ಧವಚನ/(ಧಮ್ಮಪದದ ಭಾವಾನುವಾದ)/ನಾ.ನಂಜಮ್ಮ ೭೦/-
* ಕೊಳಗ/ಕಾದಂಬರಿ ಡಾ.ನಾ.ಡಿಸೋಜ. ೧೭೦/-
* ಪಂಚತಂತ್ರ/(ಮಕ್ಕಳ ಕಥಾಮಾಲೆ-೧) ಡಾ.ನಾ.ಡಿಸೋಜ ೪೦/-
* ಹಿತೋಪದೇಶ/(ಮಕ್ಕಳ ಕಥಾಮಾಲೆ-೨) ಡಾ.ನಾ.ಡಿಸೋಜ ೩೫/-
* ಗುರುದೇವರ ಕಥೆಗಳು/(ಮಕ್ಕಳ ಕಥಾಮಾಲೆ-೩) ಡಾ.ನಾ.ಡಿಸೋಜ ೪೫/-
* ಪುಟ್ಟಜ್ಜಿ ಪುಟ್ಟಜ್ಜಿ ಕತೆ ಹೇಳು/(ಮಕ್ಕಳ ಕಥಾಮಾಲೆ-೪)/ಡಾ.ನಾ.ಡಿಸೋಜ ೪೫/-
* ಗುಬ್ಬಿ ಬಂತು ಗೂಡಿಗೆ/(ಮಕ್ಕಳ ಕಥಾಮಾಲೆ-೫) ಡಾ.ನಾ.ಡಿಸೋಜ ೪೫/-
* ಆನೆ ಹುಡುಗ ಅಬ್ದುಲ್ಲ ಮತ್ತು ಅಂಬುಗ ಎಂಬ ಹಕ್ಕಿ/(ಮಕ್ಕಳ ಕಥಾಮಾಲೆ-೬)
ಡಾ. ನಾ. ಡಿಸೋಜ ೪೫/-
* ಮಿಲಿಟ್ರಿ ಮಾಮಾ/(ಮಕ್ಕಳ ಕಥಾಮಾಲೆ-೭) ಡಾ.ನಾ.ಡಿಸೋಜ ೪೫/-
* ಹಾ! ಸವಿಗನ್ನಡ/(ಚಿಂತನ ಬರಹಗಳು) ಡಾ.ನಾ.ಡಿಸೋಜ ೩೦/-*
* ವಿವೇಕ ವಿವೇಚನೆ/(ಚಿಂತನ ಬರಹಗಳು) ಡಾ.ನಾ.ಡಿಸೋಜ ೪೫/-*
* ಜಾನಪದ ಸ್ವರೂಪ/ಡಾ. ಹಾ.ಮಾ. ನಾಯಕ ೬೦/-
* ಕನಕದಾಸರ ಶ್ರೀ ಹರಿಭಕ್ತಿಸಾರ/(ವ್ಯಾಖ್ಯಾನ-ವಿಶ್ಲೇಷಣೆ) ಸಂಪುಟ-೧ ಎಂ.ಆರ್.ಎಸ್. ೪೦೦/-
* ಕನಕದಾಸರ ಶ್ರೀ ಹರಿಭಕ್ತಿಸಾರ/(ವ್ಯಾಖ್ಯಾನ-ವಿಶ್ಲೇಷಣೆ) ಸಂಪುಟ-೨ ಎಂ.ಆರ್.ಎಸ್. ೪೦೦/-
* ರವೀಂದ್ರನಾಥ ಠಾಕೂರ್/(ವ್ಯಕ್ತಿಚಿತ್ರ) ಡಾ. ಹಾ.ಮಾ. ನಾಯಕ ೧೫೦/-
* ಚಿತ್ರದುರ್ಗದ ಮಹಾಮಾತಾಶ್ರೀ ಓಬಳವ್ವ ನಾಗತಿ/(ಐತಿಹಾಸಿಕ ಕಾದಂಬರಿ)
ಡಾ. ಬಿ.ಎಲ್. ವೇಣು ೨೫೦/-
* ಬಿಚ್ಚುಗತ್ತಿ ಭರಮಣ್ಣನಾಯಕ/(ಡಾ. ಬಿ.ಎಸ್. ವೇಣು) ೨೫೦/-
* ಮನೆಕಟ್ಟಿ ನೋಡು/(ಲೇಖನಗಳ ಸಂಗ್ರಹ) ಬಿ. ಗಣಪತಿ ಉತ್ತುಂಗ ೧೦೦/-*
* ಮನನೀಯರು/(ವ್ಯಕ್ತಿ ಪರಿಚಯ) ಬಿ. ಗಣಪತಿ ಉತ್ತುಂಗ ೬೦/-*
* ಅಣ್ಣಾ ಹಜಾರೆ/(ವ್ಯಕ್ತಿಚಿತ್ರ) ಗಿರೀಶ್ ಜಕಾಪುರೆ ೮೦/-
* ಎತ್ತಿನಗಾಡಿ ಎಕ್ಸ್‌ಪ್ರೆಸ್/(ಲಘು ಪ್ರಬಂಧಗಳು) ವಿನಿಶಾ ರಿಯಾ ೧೨೦/-
* ಪ್ರೇಮ ನವೋದಯ/(ವಿಮರ್ಶೆ) ಡಾ. ಜಿ. ಪ್ರಶಾಂತ ನಾಯಕ ೧೨೦/-
* ನಾನಕ್ಕೆ ನಿನ್‌ತಂಗೆ!/(ವಿಮರ್ಶೆ) ಡಾ. ಜಿ. ಪ್ರಶಾಂತ ನಾಯಕ ೧೧೦/-
* ಪ್ರೇಮ ಭಾವಗೀತೆಗಳು/(ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ) ೬೫/-



ಆಧುನಿಕ ಯುಗದಲ್ಲಿ ಸಾಹಿತ್ಯ ವಿಮರ್ಶೆಯು ಬಹು ಮುಖ್ಯವಾದ ಸಾಹಿತ್ಯ ಸಂಕಥನಗಳಾಗಿವೆ. ಸರಳವಾಗಿ ಹೇಳಬೇಕೆಂದರೆ, ಪುನರುಜ್ಜೀವನ ಕಾಲಘಟ್ಟದ ತರುವಾಯ ವೈಜ್ಞಾನಿಕ ಮನೋಧರ್ಮ; ಪ್ರಗತಿಪರತೆ; ನಿರೀಶ್ವರವಾದ; ವಸ್ತುನಿಷ್ಠತೆ; ಮುಂತಾದ ಪದಗಳು ಹೆಚ್ಚಾಗಿ ಚಾಲ್ತಿಗೆ ಬಂದವು. ಅಷ್ಟೇ ಅಲ್ಲ - ಅದಕ್ಕಿಂತ ಹೆಚ್ಚಾಗಿ ಒಂದು ನಿರ್ದಿಷ್ಟ ಸಾಮಾಜಿಕ ವರ್ಗವು ಅಲ್ಲಿ ಉದಯವಾಯಿತು. ಈ ವಿಶಿಷ್ಟ ಸಾಮಾಜಿಕ ವರ್ಗವು ಉತ್ಪಾದನೆಯ ಸಂಬಂಧದೊಂದಿಗೆ ತನ್ನನ್ನು ತಾನು ನೇರವಾಗಿ ಗುರುತಿಸಿಕೊಳ್ಳುತ್ತಿರಲಿಲ್ಲ. ಇದರ ಪರಿಣಾಮವೆಂದರೆ ಸಾಹಿತ್ಯ ಸಂವಾದದಲ್ಲಿ ರೂಪುಗೊಂಡ ಒಂದು ಖಾಲಿಯಾದ ಜಾಗವನ್ನು ಸಾಹಿತ್ಯದಲ್ಲಿ ರೂಪುಗೊಳಿಸಬೇಕಾಗಿತ್ತು. ಇದರ ಪರಿಣಾಮವೇ ? 'ಸಾಹಿತ್ಯ ವಿಮರ್ಶೆ'ಯು ಹುಟ್ಟಿಕೊಂಡಿರುವುದು ಎಂಬುದನ್ನು ಈ ಕೃತಿಯು ವಿಶ್ಲೇಷಿಸುತ್ತದೆ.

ಚಿತ್ರ ವಿನ್ಯಾಸ: ಸೌಮ್ಯ ಕಲ್ಯಾಣಕರ್


ಗೀತಾಂಜಲಿ ಪುಸ್ತಕ ಪ್ರಕಾಶನ
ಕಂದಾಯ ಭವನ, ೧೦೦ ಅಡಿ ರಸ್ತೆ,
ರಾಜೇಂದ್ರನಗರ, ಶಿವಮೊಗ್ಗ
ದೂ. ೯೪೪೯೮ ೮೬೩೯೦
geethanjalipusthakaprakashana@gmail.com

ISBN : 978-93-86855-43-

9 789386 855435
₹ 160/-